RNI No. **KARBIL/2001/47147**

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೯<br>Volume 149 | ಬೆಂಗಳೂರು, ಗುರುವಾರ, ಜನವರಿ ೧೬, ೨೦೧೪ (ಪುಷ್ಯ ೨೬, ಶಕ ವರ್ಷ ೧೯೩೫)<br>Bangalore, Thursday, January 16, 2014 (Pushya 26, Shaka Varsha 1935) | ಸಂಚಿಕೆ ೩<br>Issue 3 |
|---|---|---|

## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ** : ಶ್ರೀ ಕೆ.ಎಸ್. ಹುತ್ತನಗೌಡ, ನೋಟರಿ, ಶಿಗ್ಗಾಂವ್ ಕಂದಾಯ ತಾ: ಹಾವೇರಿ ಜಿಲ್ಲೆ ಇವರ ಹೆಸರನ್ನು ನೋಟರಿ ರಿಜಿಸ್ಟರ್‌ನಿಂದ ತೆಗೆದು ಹಾಕುವ ಬಗ್ಗೆ.

**ಓದಲಾಗಿದೆ :**
1. ಶಿಗ್ಗಾಂವ ವಕೀಲರ ಸಂಘದ ಸದಸ್ಯರುಗಳಿಂದ ಸ್ವೀಕೃತವಾದ ದೂರು ಮನವಿ ದಿನಾಂಕ : 20–01–2012.
2. ಶ್ರೀ ಮಹಾದೇವಪ್ಪ ತಂದೆ ಯಲ್ಲಪ್ಪ ಹರಕುಣಿ ಇವರ ದೂರು ದಿನಾಂಕ : 23–02–2011.
3. ಸರ್ಕಾರದ ಪತ್ರ ಸಂಖ್ಯೆ : ಲಾ 28 ಎಲ್‌ಸಿಎಲ್ 2011, ದಿನಾಂಕ : 18–03–2011.
4. ಶ್ರೀ ಕೆ.ಎಸ್. ಹುತ್ತನಗೌಡ ಇವರ ದಿನಾಂಕ : 25–03–2011ರ ಲಿಖಿತ ಹೇಳಿಕೆ.
5. ಸರ್ಕಾರದ ಪತ್ರ ಸಂಖ್ಯೆ : ಲಾ 28 ಎಲ್‌ಸಿಎಲ್ 2011, ದಿನಾಂಕ : 24–05–2011.
6. ಪ್ರಧಾನ ಜಿಲ್ಲೆ ಮತ್ತು ಸತ್ರ ನ್ಯಾಯಾಧೀಶರು, ಹಾವೇರಿ ಜಿಲ್ಲೆ ಇವರ ದಿನಾಂಕ : 04–10–2011ರ ಪತ್ರ.

**ಪ್ರಸ್ತಾವನೆ :**

ಶಿಗ್ಗಾಂವ ವಕೀಲರ ಸಂಘದ ಸದಸ್ಯರುಗಳು, ಶಿಗ್ಗಂವ ತಾಲ್ಲೂಕಿನಲ್ಲಿ ನೋಟರಿಯಾಗಿ ಕೆಲಸ ನಿರ್ವಹಿಸುತ್ತಿರುವ ಶ್ರೀ ಕೆ.ಎಸ್. ಹುತ್ತನಗೌಡ ಇವರ ವಿರುದ್ಧ ಓದಲಾದ (1)ರ ದಿನಾಂಕ : 20–01–2012 ರಲ್ಲಿ ದೂರನ್ನು ನೀಡಿದ್ದು, ಸದರಿ ದೂರಿನಲ್ಲಿ ನೋಟರಿಯವರು ಅನಧಿಕೃತವಾಗಿ ಅಫಿಡವಿಟ್ ಮಾಡುವುದು, ಅಫಿಡವಿಟ್‌ಗೆ ಯಾವುದೇ ವಕೀಲರ ಸಹಿ ಇಲ್ಲದೇ ತಾವೇ ಸ್ವಂತ ಅಫಿಡವಿಟ್ ಮಾಡುವುದು, ಅಫಿಡವಿಟ್‌ಗೆ ಕನಿಷ್ಠ ರೂ. 200/–ಗಳನ್ನು ತೆಗೆದುಕೊಳ್ಳುವುದು. ಅಫಿಡವಿಟ್ ಮಾಡಿಸಿರುವುದಕ್ಕೆ ಸಾರ್ವಜನಿಕರಿಗೆ ರಶೀದಿ ನೀಡದೇ ಇರುವುದು, ಚುನಾವಣಾ ಸಮಯದಲ್ಲಿ ಮಾಡಿಸಿರುವ ಅಫಿಡವಿಟ್‌ನಲ್ಲಿ ಯಾವ ವಕೀಲರ ಐಡೆಂಟಿಫಿಕೇಷನ್ ಹಾಕಿಸಿಲ್ಲದೆ ಇರುವುದನ್ನು ತಿಳಿಸಿ, ಶ್ರೀ ಕೆ.ಎಸ್. ಹುತ್ತನಗೌಡ ಇವರನ್ನು ನೋಟರಿ ಹುದ್ದೆಯಿಂದ ತೆಗೆದುಹಾಕುವಂತೆ ಕೋರಿರುತ್ತಾರೆ ಹಾಗೂ ಮುಂದುವರೆದು, ಶ್ರೀ ಮಹಾದೇವಪ್ಪ ಯಲ್ಲಪ್ಪ ಹರಕುಣಿ, ಹಾವೇರಿ ಜಿಲ್ಲೆ ಇವರು ಓದಲಾಗಿದೆ (2)ರ ದಿನಾಂಕ : 23–02–2011 ರಲ್ಲಿ ಸರ್ಕಾರಕ್ಕೆ ದೂರನ್ನು ಸಲ್ಲಿಸಿ, ಶ್ರೀ ಕೆ.ಎಸ್. ಕೆ.ಎಸ್. ಹುತ್ತನಗೌಡ, ನೋಟರಿ, ಶಿಗ್ಗಾಂವ ಇವರು ಬೇಜವಾಬ್ದಾರಿ, ನಿರ್ಲಕ್ಷತನ ಹಾಗೂ ಕಾನೂನಿಗೆ ವಿರೋಧವಾಗಿ ತಮ್ಮ ಸತ್ತ ತಾಯಿ ಹೆಸರಿಗೆ ಹಾಗೂ ಜೀವಾವಧಿ ಶಿಕ್ಷೆಯನ್ನು ಜೈಲಿನಲ್ಲಿ ಅನುಭವಿಸುತ್ತಿರುವ ತಮ್ಮ ತಂದೆ ಹೆಸರಿಗೆ ಪ್ರಮಾಣ ಪತ್ರ ಮಾಡಿಸಿರುತ್ತಾರೆಂದು ತಿಳಿಸಿರುತ್ತಾರೆ.

ಸದರಿ ಓದಲಾದ (1) ಮತ್ತು (2)ರ ದೂರಿನ ಪ್ರತಿಗಳನ್ನು ಶ್ರೀ ಕೆ.ಎಸ್. ಹುತ್ತನಗೌಡ, ನೋಟರಿ ಇವರಿಗೆ ಓದಲಾದ (3)ರ ಇದೇ ಕಡತ ಸಂಖ್ಯೆಯ ದಿನಾಂಕ : 18–03–2011ರ ಪತ್ರದೊಂದಿಗೆ ಕಳುಹಿಸಿ ಲಿಖಿತ ಹೇಳಿಕೆಯನ್ನು ಕೋರಲಾಗಿದ್ದು. ಅದರಂತೆ, ಓದಲಾಗಿದೆ (4)ರ ದಿನಾಂಕ : 25–03–2011 ರಲ್ಲಿ ಸದರಿ ನೋಟರಿಯವರು ತಮ್ಮ ಲಿಖಿತ ಹೇಳಿಕೆಯನ್ನು ಸಲ್ಲಿಸಿ, ಯಾರೋ ಅವರಿಗೆ ಆಗದವರು ಮೋಸ ಮಾಡಿ ಅವರಿಂದ ಪ್ರಮಾಣ ಪತ್ರವನ್ನು ಮಾಡಿಸಿರುವರೆಂದೂ, ಸದರಿ ದೂರಿನ ಅರ್ಜಿಯನ್ನು ಕಿತ್ತು ಹಾಕಬೇಕೆಂದು ವಿನಂತಿಸಿಕೊಂಡಿರುತ್ತಾರೆ.

ಓದಲಾದ (5)ರ ಸರ್ಕಾರದ ಪತ್ರ ದಿನಾಂಕ : 24–05–2011ರೊಂದಿಗೆ ಸದರಿ ನೋಟರಿಯವರ ವಿರುದ್ಧ ಸ್ವೀಕೃತವಾದ ದೂರಿನ ಪ್ರತಿಗಳು ಹಾಗೂ ನೋಟರಿಯವರ ಲಿಖಿತ ಹೇಳಿಕೆಯನ್ನು ಲಗತ್ತಿಸಿ, ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಹಾವೇರಿ ಜಿಲ್ಲೆ ಇವರಿಗೆ ಸಲ್ಲಿಸಿ, ಸದರಿ ದೂರನ್ನು ನೋಟರಿ ನಿಯಮಗಳನ್ವಯ ಪರಿಶೀಲಿಸಿ, ನಿಯಮ 6–9 ರನ್ವಯ ವಿಚಾರಣೆ ನಡೆಸಿ, ನೋಟರಿ ನಿಯಮ 13(11)ರನ್ವಯ ವಿಚಾರಣಾ ವರದಿಯನ್ನು ಕಳುಹಿಸಿಕೊಡುವಂತೆ ಕೋರಲಾಗಿತ್ತು. ಅದರಂತೆ, ಓದಲಾದ (6)ರ ದಿನಾಂಕ : 04–10–2011ರ ಪತ್ರದೊಂದಿಗೆ ಪ್ರಧಾನ ಜಿಲ್ಲಾ ಮತ್ತು ನ್ಯಾಯಾಧೀಶರು

ಇವರು ನೋಟರಿ ನಿಯಮ 13(11) ರನ್ವಯ ವಿಚಾರಣಾ ವರದಿಯನ್ನು ಸಲ್ಲಿಸಿದ್ದು, ವರದಿಯಂತೆ ಸದರಿ ನೋಟರಿಯವರಿಂದ ಕರ್ತವ್ಯ ಲೋಪವನ್ನು ಸರ್ಕಾರದ ಹಂತದಲ್ಲಿ ಪರಿಶೀಲಿಸಿ, ಇವರನ್ನು ದಿನಾಂಕ : 27–03–2012 ರಿಂದ ಒಂದು ವರ್ಷದ ಅವಧಿಗೆ ಅಮಾನತ್ತುಗೊಳಿಸಲಾಗಿತ್ತು.

ಸದರಿ ಶ್ರೀ ಕೆ.ಎಸ್. ಹುತ್ತನಗೌಡಸ್, ನೋಟರಿ ಇವರು ಸದರಿ ಅಮಾನತ್ತಿನ ಅವಧಿಯಲ್ಲಿ ನೋಟರಿ ಕೆಲಸ ನಿರ್ವಹಿಸಿರುವರೆಂದು ಸಾಕಷ್ಟು ದೂರುಗಳು ಸ್ವೀಕೃತವಾಗಿದ್ದು, ದೂರುಗಳಿಗೆ ಸದರಿ ನೋಟರಿಯವರು ನೀಡಿರುವ ಲಿಖಿತ ಹೇಳಿಕೆಯನ್ನು ಪರಿಶೀಲಿಸಲಾಗಿದ್ದು, ಸದರಿ ಹೇಳಿಕೆಯು ಸಮಂಜಸವಾಗಿರುವುದಿಲ್ಲವೆಂದು ಅಭಿಪ್ರಾಯಪಟ್ಟು ನೋಟರಿ ನಿಯಮಗಳು 1956ರ ನಿಯಮ 13(12)(ಬಿ)(1)ರ ಪ್ರಕಾರ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಲಾ 28 ಎಲ್‌ಸಿಎಲ್ 2011, ಬೆಂಗಳೂರು, ದಿನಾಂಕ : 07–11–2013**

ಶ್ರೀ ಕೆ.ಎಸ್. ಹುತ್ತನಗೌಡ, ನೋಟರಿ, ಶಿಗ್ಗಾಂವ್ ಕಂದಾಯ ತಾ: ಹಾವೇರಿ ಜಿಲ್ಲೆ ಇವರು ಕರ್ತವ್ಯ ಲೋಪವೆಸಗಿರುವ ಕಾರಣ ನೋಟರಿ ನಿಯಮಗಳು 1956ರ ನಿಯಮ 13(12)(ಬಿ)(1)ರನ್ವಯ ಇವರ ಪ್ರಮಾಣ ಪತ್ರವನ್ನು ರದ್ದುಪಡಿಸಲಾಗಿದೆ ಹಾಗೂ ಶಾಶ್ವತವಾಗಿ ಇವರನ್ನು ನೋಟರಿಯಾಗಿ ನೇಮಕಾತಿ ಆಗದಂತೆ ತಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಕೆ. ಲಕ್ಷ್ಮಿನರಸಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2),

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

**PR. 1085**
**SC-15**

## PLANNING, PROGRAMME MONITORING AND STATISTIC SECRETARIAT

**SUB :** Constitution of Technical Committee to suggest appropriate measures to take action on Crop Inventory and Updation Pilot Survey report.

**REF :**

1. Proceedings of the State High Power Committee for Challenge Fund programme meeting chaired by Chief Secretary, held on 12-10-2012.
2. Proceedings of State level co-ordination Committee meeting chaired by Additional Chief Secretary and Development Commissioner, held on 28-06-2013.
3. File No. DES 20 KSSDA 2012 (P-2) from Director, Directorate of Economic and Statistics Department.

**PREAMBLE :**

In the proceedings dated : 12-10-2012 read at (1) above the State High Power Committee for Challenge Fund programme, chaired by Chief Secretary has approved the Crop Inventory and updation project to bring improvement in collection of quantity and timely statistics on the crop area using advanced technology. A study was taken up on a pilot basis in 12 villages of Nallur Grampanchayat of Gubbi Taluk of Tumkur District on GIS-GPS based Crop inventory and Updation methodology through IIMB Consortium, Bangalore.

In the proceedings dated : 28-06-2013 read at (2) above the State Level Co-ordination Committee chaired by Additional Chief Secretary and Development Commissioner proposed to constitute a technical experts committee to be headed by Dr. P.P. Nageshwara Rao, Scientist (Retd.) ISRO, Bangalore, to suggest a methodology to arrive at crop area Statistics by using Remote Sensing and GPS-GIS based automatic and hybrid methodology.

Director of Economic and Statistics Department, Bangalore in the file read at (3) above has informed that the Principal Secretary, Planning department has approved for the sitting fee, travelling and other allowances in consonance with the rates as adopted for ATF Expert Group of RFD vide Government Notification PD 2 PMI 2012 (Part-I), dated : 27-07-2012, to the members and the outstation experts of this committee, Hence this order.

**GOVERNMENT ORDER NO. PD 131 SMC 2013, Bangalore, dated : 24-10-2013.**

The Government is pleased to constitute the Technical Experts Committee to suggest the Government on the basis of report on pilot project on GPS-GIS basis Crop Inventory and Updation in Nallur Grama Panchayat taken up by IIMB Consortium, Bangalore. The Committee shall comprise the following members :

| | | | |
|---|---|---|---|
| 1. | Dr. P.P. Nageshwara Rao, Scientist (Retd.) ISRO, Bangalore | : | Chairman |
| 2. | Dr. K.R. Manjunath, Head, CAD, Space Application Centre, Ahmedabad. | : | Member |
| 3. | Dr. M.V.R. Sesha Sai, Group Head, National Remote Sensing Centre (NRSC), Hyderabad | : | Member |
| 4. | Prof. P.G. Chengappa, Former Vice Chanceller, UAS, Bangalore | : | Member |
| 5. | Prof. R.S. Deshpande, Director (Retd), ISEC, Bangalore | : | Member |

| | | | |
|---|---|---|---|
| 6. | Director, KSRSAC, Bangalore | : | Member |
| 7. | Commissioner, Land Records & Survey Settlement, Bangalore | : | Member |
| 8. | Director, Directorate of Agriculture, Bangalore | : | Member |
| 9. | Director, Directorate of Economics and Statistics, Bangalore | : | Member |
| 10. | Director, Directorate of Horticulture, Bangalore | : | Member |
| 11. | Project Director, KSSDA | : | Member-Secretary |

The functions of the Committee are as follows :

Committee may invite the representatives of IIMB Consortium to present the details of pilot project on GPS-GIS based Crop Inventory and updation in Nallur Gramapanchayat of Gubbi Taluk before the committee. The Committee shall prepare a suggestive report on appropriate methodology using both remote sensing and GPS-GIS for generating crop statistics by evaluating various sites on authomatic & hybrid technology as detailed in the Annexure. The Technical Experts Committee shall submit its report with in two months.

The technical experts shall be paid sitting fee, and conveyance charges as follows :

a) Honorarium of Rs. 4000 per day as sitting fees for the days of the meeting.

b) Conveyance charges at the rate of Rs. 1000 per day for the days of the meeting.

c) Boarding and Lodging charges upto Rs. 5000 per day as reimbursement of hotel/guest house charges to outstation members, subject to production of bills for the actural expenditure incurred.

d) Air fare economy class by Air India for outstation members.

The expenditure on account of this committee should be borne under the Head of Account 3454-02-204-0-18-103 under the activity "Crop area and production estimate-Refresher training programme to make aware the importance of Agriculture statistics, at Taluka and Hobli level including pending bills" by Karnataka State Statistics Development Agency.

By Order and in the name of the Governor of Karnataka

**S. THIPPESWAMY**

Deputy Secretary to Government,
Planning, Programme Monitoring
and Statistics Department.

## ANNEXURE TO THE G.O. NO. PD 131 SMC 2013, Dated : 24-10-2013.

**Terms of Reference of the Committee of Technical Experts.**

1. Advice on the appropriate methodology using both remote sensing and GPS-GIS for generating crop statistics by evaluating various option on automatic and hybrid methodology.
2. Advice on reduction of huge manpower for timely and accurate estimation of cropped area by using above advised methods.
3. Advice on replication of developed specific standard crop signature in respect of similar cropping pattern in other Districts and Taluks.
4. Extent of accuracy of estimates in the new method at different level, starting from hobli upto State level and suggestion to improve them.
5. Advice about the adoptability of the proposed method with respect to geographical boundaries.
6. The best method of technology that could be adopted for estimation in respect of mixed crops and relay crops.
7. Advice on possibility of combining different imageries of different satellite and accuracy of crop area of combined images of different satellite.
8. Cost effectiveness, limitation, pitfalls and pros and cons of methodology being advised.
9. Any other relevant issues the committee desires to bring before the government.

**S. THIPPESWAMY**

Deputy Secretary to Government,
Planning, Programme Implemenation
and Statistics Department.

**P.R. 1083**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ** : ಡಾ॥ ವಿದ್ಯಾಸಾಗರ್, ವೈದ್ಯಾಧಿಕಾರಿಗಳು, ಪ್ರಾಥಮಿಕ ಆರೋಗ್ಯ ಕೇಂದ್ರ, ಹೊನಗೇರ, ಯಾದಗಿರಿ ಜಿಲ್ಲೆ, ಇವರನ್ನು ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ.

**ಉಲ್ಲೇಖ** : ಆಯುಕ್ತರು, ಆಕುಕ ಸೇವೆಗಳು, ಬೆಂಗಳೂರು ಇವರ ಪ್ರಸ್ತಾವನೆ ಸಂಖ್ಯೆ : ಡಿಪಿಜಿ/ಬೆಂವಿ-II/ಚಿ/59/2010-11, ದಿನಾಂಕ : 23-07-2013.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ : 23-07-2013ರ ಪತ್ರದಲ್ಲಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಡಾ॥ ವಿದ್ಯಾಸಾಗರ್, ವೈದ್ಯಾಧಿಕಾರಿಗಳು, ಪ್ರಾಥಮಿಕ ಆರೋಗ್ಯ ಕೇಂದ್ರ, ಹೊನಗೇರ, ಯಾದಗಿರಿ ಜಿಲ್ಲೆ ಇವರು ಈ ಹಿಂದೆ ಸಮುದಾಯ ಆರೋಗ್ಯ ಕೇಂದ್ರ, ನಾಯಕನ ಹಟ್ಟಿ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ, ಇಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಶ್ರೀ ತಿಪ್ಪೇಸ್ವಾಮಿ, ಬಿನ್. ಸಿದ್ದಯ್ಯ, ಎಂಬ ರೋಗಿಗೆ ಸಕಾಲದಲ್ಲಿ ಚಿಕಿತ್ಸೆ ನೀಡದೆ ಮರಣ ಹೊಂದಲು ಕಾರಣರಾದ ಕರ್ತವ್ಯಲೋಪ ಆರೋಪವು ಸಾಬೀತಾಗಿರುವುದರಿಂದ, ಸದರಿಯವರಿಗೆ ದಂಡನೆ ವಿಧಿಸಲು ಕೋರಿರುತ್ತಾರೆ.

ಲಭ್ಯವಿರುವ ದಾಖಲೆಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಡಾ॥ ವಿದ್ಯಾಸಾಗರ್, ವೈದ್ಯಾಧಿಕಾರಿಗಳು, ಪ್ರಾಥಮಿಕ ಆರೋಗ್ಯ ಕೇಂದ್ರ, ಹೊನಗೇರ, ಯಾದಗಿರಿ ಜಿಲ್ಲೆ, ಇವರು ಖಾಯಂಪೂರ್ವ ಸೇವಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸದಿರುವುದನ್ನು ಮನಗಂಡು ಸದರಿಯವರು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವೈದ್ಯಾಧಿಕಾರಿ ಹುದ್ದೆಗೆ ಸೂಕ್ತರಲ್ಲವೆಂದು ಪರಿಗಣಿಸಿ, ಇವರನ್ನು ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಲು ನಿರ್ಧರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಆಕುಕ 194 ಎಂಎಸ್‌ಎ 2013, ಬೆಂಗಳೂರು, ದಿನಾಂಕ : 22-10-2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರವು ಡಾ॥ ವಿದ್ಯಾಸಾಗರ್, ವೈದ್ಯಾಧಿಕಾರಿಗಳು, ಪ್ರಾಥಮಿಕ ಆರೋಗ್ಯ ಕೇಂದ್ರ, ಹೊನಗೇರ, ಯಾದಗಿರಿ ಜಿಲ್ಲೆ, ಇವರನ್ನು ಕರ್ನಾಟಕ ನಾಗರೀಕ ಸೇವಾ (ಖಾಯಂಪೂರ್ವ) ನಿಯಮಗಳು, 1977ರ ನಿಯಮ 6(1)ರ ಪ್ರಕಾರ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ವಿಶ್ವನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

PR. 1090

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ** : ಆಹಾರ ಸುರಕ್ಷತಾ ಮತ್ತು ಗುಣಮಟ್ಟ ಕಾಯ್ದೆಯ ಅನುಷ್ಠಾನಕ್ಕಾಗಿ ಹೊಸದಾಗಿ ಸೃಜಿಸಲಾದ ಹಿರಿಯ ಆಹಾರ ಸುರಕ್ಷತಾಧಿಕಾರಿ ಗ್ರೇಡ್-11 ಮತ್ತು ಹಿರಿಯ ಆಹಾರ ಸುರಕ್ಷತಾಧಿಕಾರಿ ಹುದ್ದೆಗಳನ್ನು 'ಬಿ' ದರ್ಜೆಯ ಹುದ್ದೆಗಳೆಂದು ಪರಿಗಣಿಸುವ ಬಗ್ಗೆ.

**ಓದಲಾಗಿದೆ :**

1. ಆಯುಕ್ತರು, ಆಹಾರ ಸುರಕ್ಷತಾ, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಾಆಸಂ/ಎಫ್‌ಎಸ್‌ಎಸ್‌ಎ/ಸಿ/30/2013-14, ದಿನಾಂಕ : 20-08-2013.
2. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 73 ಸೇಇವಿ 2012, ದಿನಾಂಕ : 20-09-2013.

**ಪ್ರಸ್ತಾವನೆ :**

ರಾಜ್ಯದಲ್ಲಿ ಆಹಾರ ಸುರಕ್ಷತಾ ಮತ್ತು ಗುಣಮಟ್ಟ ಕಾಯ್ದೆಯನ್ನು ಜಾರಿಗೊಳಿಸುವ ಉದ್ದೇಶದಿಂದ ಅವಶ್ಯವಿರುವ ಹುದ್ದೆಗಳನ್ನು ಸೃಜಿಸುವ/ಪದನಾಮೀಕರಿಸಿ ಹೊರಡಿಸಿದ ಸರ್ಕಾರದ ಆದೇಶ ಸಂಖ್ಯೆ : ಆಕುಕ 317 ಸಿಜಿಇ 2011, ದಿನಾಂಕ : 23-08-2012 ರಲ್ಲಿ ಆಕುಕ ಇಲಾಖೆಯಲ್ಲಿದ್ದ ರೂ. 21600-40050 ವೇತನ ಶ್ರೇಣಿಯ ಹಿರಿಯ ಆಹಾರ ನಿರೀಕ್ಷಕರ ಹುದ್ದೆಯನ್ನು ಹಿರಿಯ ಆಹಾರ ಸುರಕ್ಷತಾ ಅಧಿಕಾರಿ ಗ್ರೇಡ್-11 ಎಂದು ಮರುಪದನಾಮಿಸಿದೆ ಹಾಗೂ ರೂ. 22800-43200 ವೇತನ ಶ್ರೇಣಿಯ ಹಿರಿಯ ಆಹಾರ ಸುರಕ್ಷತಾಧಿಕಾರಿ ಹುದ್ದೆಗಳನ್ನು ಹೊಸದಾಗಿ ಸೃಜಿಸಲಾಗಿದೆ. ಈ ಹಿರಿಯ ಆಹಾರ ಸುರಕ್ಷತಾ ಅಧಿಕಾರಿ ಗ್ರೇಡ್-11 ಮತ್ತು ಹಿರಿಯ ಆಹಾರ ಸುರಕ್ಷತಾಧಿಕಾರಿ ಹುದ್ದೆಗಳನ್ನು 'ಬಿ' ದರ್ಜೆಯ ಪತ್ರಾಂಕಿತ ಅಧಿಕಾರಿಗಳೆಂದು ಪರಿಗಣಿಸಿ ಆದೇಶ ಹೊರಡಿಸುವಂತೆ ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು ಆಹಾರ ಸುರಕ್ಷತೆ ಇವರು ಕೋರಿದ್ದಾರೆ.

ಮೇಲೆ ಓದಲಾದ ಕ್ರಮಾಂಕ (2)ರ ಸರ್ಕಾರದ ಅಧಿಸೂಚನೆಯಲ್ಲಿ ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) (ತಿದ್ದುಪಡಿ) ನಿಯಮಗಳು, 2013ರಲ್ಲಿ ರೂ. 21600-40050 ಮತ್ತು ಅದಕ್ಕೂ ಮೇಲ್ಪಟ್ಟ ವೇತನ ಶ್ರೇಣಿಗಳನ್ನು ಆದರೆ ರೂ. 28100-50100 ಕ್ಕಿಂತ ಕೆಳಗಿನ ವೇತನ ಶ್ರೇಣಿಯನ್ನು ಹೊಂದಿರುವ ಹುದ್ದೆಗಳನ್ನು ಸಮೂಹ 'ಬಿ' ಎಂದು ಪರಿಗಣಿಸಿದೆ.

ಈ ಹಿನ್ನೆಲೆಯಲ್ಲಿ ಆಯುಕ್ತರು, ಆಹಾರ ಸುರಕ್ಷತಾ ಇವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಆಕುಕ 349 ಸಿಜಿಇ 2013, ಬೆಂಗಳೂರು, ದಿನಾಂಕ : 03-10-2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಆಹಾರ ಸುರಕ್ಷತಾ ಮತ್ತು ಗುಣಮಟ್ಟ ಕಾಯ್ದೆಯನ್ನು ರಾಜ್ಯದಲ್ಲಿ ಜಾರಿಗೊಳಿಸಲು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿನ ಕೆಲವೊಂದು ಹುದ್ದೆಗಳನ್ನು ಮರುಪದನಾಮಿಸಿದ ಹುದ್ದೆಗಳಲ್ಲಿ ಹಾಗೂ ಹೊಸದಾಗಿ ಸೃಜಿಸಲಾದ

ಹುದ್ದೆಗಳಲ್ಲಿ ರೂ. 21600–40050 ವೇತನ ಶ್ರೇಣಿಯ ಹಿರಿಯ ಆಹಾರ ಸುರಕ್ಷತಾಧಿಕಾರಿ ಗ್ರೇಡ್–II ಹುದ್ದೆಗಳನ್ನು ಹಾಗೂ ರೂ. 22800–43200 ವೇತನ ಶ್ರೇಣಿಯ ಹಿರಿಯ ಆಹಾರ ಸುರಕ್ಷತಾಧಿಕಾರಿ ಹುದ್ದೆಗಳನ್ನು 'ಬಿ' ದರ್ಜೆಯ ಪತ್ರಾಂಕಿತ ಅಧಿಕಾರಿ ಹುದ್ದೆಗಳೆಂದು ಪರಿಗಣಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಪಿ. ನಾರಾಯಣ**

ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಆರೋಗ್ಯ 1 ಮತ್ತು 2).

**PR. 1093**
**SC-200**

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎಸ್. ಮಹದೇವಸ್ವಾಮಿ, ಸಹಾಯಕ ಸರ್ಕಾರಿ ಅಭಿಯೋಜಕರು, ಅಧಿಕ ಸಿ.ಜೆ. (ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಮದ್ದೂರು ಇವರ ವಿರುದ್ಧದ ಇಲಾಖಾ ವಿಚಾರಣೆ ಸಂಬಂಧದ ಹೊರಡಿಸಿರುವ ದಂಡನಾದೇಶದ ವಿರುದ್ಧದ ಮೇಲ್ಮನವಿ ಬಗ್ಗೆ.

**ಉಲ್ಲೇಖ :**

1. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಮತ್ತು ಶಿಸ್ತು ಪ್ರಾಧಿಕಾರ, ಬೆಂಗಳೂರು ಇವರ ಆದೇಶ ಸಂಖ್ಯೆ : ಡಿಪಿಎನ್/ಕೇಂಸ/ವಿವ/49/2010–11, ದಿನಾಂಕ : 23–08–2011.
2. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಮತ್ತು ಶಿಸ್ತು ಪ್ರಾಧಿಕಾರ, ಬೆಂಗಳೂರು ಇವರ ಆದೇಶ ಸಂಖ್ಯೆ : ಡಿಪಿಎನ್/ಕೇಂಸ/ವಿವ/49/2010–11, ದಿನಾಂಕ : 07–02–2013.
3. ಶ್ರೀ ಎಸ್. ಮಹದೇವಸ್ವಾಮಿ, ಸಹಾಯಕ ಸರ್ಕಾರಿ ಅಭಿಯೋಜಕರು, ಅಧಿಕ ಸಿ.ಜೆ. (ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಮದ್ದೂರು ಇವರ ಮೇಲ್ಮನವಿಯ ದಿನಾಂಕ : 09–04–2013.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರ ಪತ್ರದ ಸಂಖ್ಯೆ : ಡಿಪಿಎನ್/ಕೇಂಸ/ವಿವ/49/2010–11, ದಿನಾಂಕ : 08–07–2013.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿನ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಮತ್ತು ಶಿಸ್ತು ಪ್ರಾಧಿಕಾರ, ಬೆಂಗಳೂರು ಇವರ ದಿನಾಂಕ : 23–08–2011ರ ಆದೇಶದಲ್ಲಿ ಶ್ರೀ ಎಸ್. ಮಹದೇವಸ್ವಾಮಿ, ಸಹಾಯಕ ಸರ್ಕಾರಿ ಅಭಿಯೋಜಕರು, ಅಧಿಕ ಸಿ.ಜೆ.(ಕಿ.ವಿ)ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಮದ್ದೂರು ಇವರ ವಿರುದ್ಧದ 3 ಆರೋಪಕ್ಕೆ ಸಂಬಂಧಿಸಿದಂತೆ ಇಲಾಖಾ ವಿಚಾರಣೆ ನಡೆಸಲು ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯನ್ನು ನೇಮಿಸಿ ಆದೇಶಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿನ ನಿರ್ದೇಶಕರು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಮತ್ತು ಶಿಸ್ತು ಪ್ರಾಧಿಕಾರ, ಬೆಂಗಳೂರು ಇವರ ದಿನಾಂಕ : 07–02–2013ರ ಆದೇಶದಲ್ಲಿ ಶ್ರೀ ಎಸ್. ಮಹದೇವಸ್ವಾಮಿ ಇವರು ವಿರುದ್ಧ 3 ಆರೋಪಕ್ಕೆ ಸಂಬಂಧಿಸಿದಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿನ ಆದೇಶದ ಮೇರೆಗೆ ನಡೆಸಿದ ವಿಚಾರಣೆಯಲ್ಲಿ ವಿಚಾರಣಾಧಿಕಾರಿಯು 1ನೇ ಮತ್ತು 3ನೇ ಆರೋಪಗಳು ರುಜುವಾತಾಗಿರುವುದಿಲ್ಲವೆಂದು ಹಾಗೂ 2ನೇ ಆರೋಪದ ಬಗ್ಗೆ ಮೇಲಾಧಿಕಾರಿಗಳಿಗೆ ಅಗೌರವವನ್ನು ತೋರಿಸಿ, ಒಬ್ಬ ಜವಾಬ್ದಾರಿಯುತವಾದ ಸರ್ಕಾರಿ ನೌಕರರಿಗೆ ತರವಲ್ಲದ ರೀತಿಯಲ್ಲಿ ನಡೆದುಕೊಂಡಿದ್ದು, 2ನೇ ಆರೋಪ 'ಸ' ಕಾರಾತ್ಮಕವೆಂದು ನಿರ್ಣಯಿಸಿ, ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಇದನ್ನು ಪರಿಶೀಲಿಸಿ 2ನೇ ಆರೋಪವು ರುಜುವಾತಾಗಿರುವುದು ಮನದಟ್ಟಾಗಿರುವುದರಿಂದ ಶ್ರೀ ಎಸ್. ಮಹದೇವಸ್ವಾಮಿ ಇವರು ಎಸಗಿದ ಕರ್ತವ್ಯ ಲೋಪದ ಆರೋಪ–2ಕ್ಕೆ ಸಂಬಂಧಿಸಿದಂತೆ ಕೆಸಿಎಸ್ (ವ.ನಿ.ಮೇ) ನಿಯಮಗಳು, 1957ರ ನಿಯಮ 8(111)ರ ಅನ್ವಯ ಅಧಿಕಾರಿಯವರ ಮುಂದಿನ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ಸಹಿತವಾಗಿ (With Cumulative effect) ತಡೆಹಿಡಿಯುವ ದಂಡನೆಯನ್ನು ವಿಧಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ 3 ರಲ್ಲಿನ ಮೇಲ್ಮನವಿಯಲ್ಲಿ ಆರೋಪಿತ ಅಧಿಕಾರಿಯಾದ ಶ್ರೀ ಎಸ್. ಮಹದೇವಸ್ವಾಮಿರವರು ಮೇಲೆ ಓದಲಾದ ಕ್ರಮ ಸಂಖ್ಯೆ 2 ರಲ್ಲಿನ ಆದೇಶದ ವಿರುದ್ಧ ಮೇಲ್ಮನವಿಯನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 18ರನ್ವಯ ಮೇಲ್ಮನವಿ ಪ್ರಾಧಿಕಾರವಾದ ಸರ್ಕಾರಕ್ಕೆ ಈ ಮುಂದಿನ ಕಾರಣಾಂಶಗಳಿಂದಾಗಿ ಮೇಲೆ ಓದಲಾದ ಕ್ರಮ ಸಂಖ್ಯೆ : 2 ರಲ್ಲಿನ ದಂಡಾದೇಶವನ್ನು ರದ್ದುಪಡಿಸಿ, ಎರಡನೇ ಆರೋಪದಿಂದ ಸಹ ದೋಷಮುಕ್ತಗೊಳಿಸುವಂತೆ ಕೋರಿರುತ್ತಾರೆ.

(1) ಸರ್ವೋಚ್ಚ ನ್ಯಾಯಾಲಯವು ಯೂನಿಯನ್ ಆಫ್ ಇಂಡಿಯಾ ವಿರುದ್ಧ ಶ್ರೀ ರಂಜಾನ್‌ಖಾನ್, ಎಐಆರ್ 1991 ಎಸ್‌ಸಿ 471ರಲ್ಲಿನ ತೀರ್ಪಿನಲ್ಲಿ 2ನೇ ಕಾರಣ ಕೇಳುವ ಸೂಚನಾ ಪತ್ರದೊಂದಿಗೆ ವಿಚಾರಣಾ ವರದಿಯ ಪ್ರತಿಯನ್ನು ಒದಗಿಸುವುದನ್ನು ಕಡ್ಡಾಯಗೊಳಿಸಿದೆ. ಈ ಹಿನ್ನೆಲೆಯಲ್ಲಿ ವಿಚಾರಣಾ ವರದಿಯ ಪ್ರತಿಯೊಂದಿಗೆ 2ನೇ ಕಾರಣ ಕೇಳುವ ಸೂಚನಾ ಪತ್ರವನ್ನು ನೀಡದೇ ಹೊರಡಿಸಿರುವ ಸದರಿ ದಂಡನಾದೇಶವು ನಿಯಮಬಾಹಿರವಾಗಿದೆ.

(2) 2ನೇ ಆರೋಪದ ಸಂಬಂಧ ವಿಚಾರಣಾ ಸಮಯದಲ್ಲಿ ಆರೋಪಿತ ಅಧಿಕಾರಿಯು ದೂರವಾಣಿಯಲ್ಲಿ ಮೇಲಾಧಿಕಾರಿಯ ಹೆಸರು ಹಿಡಿದು ಕರೆದಿರುವುದು ಕಂಡು ಬಂದಿಲ್ಲವೆಂದು ಹಾಗೂ ಆರೋಪಕ್ಕೆ ಸಂಬಂಧಪಟ್ಟಂತೆ ಯಾವ ದೂರವಾಣಿ ಸಂಖ್ಯೆಗೆ ಯಾವ ನಂಬರಿನಿಂದ ಕರೆ ಮಾಡಲಾಗಿತ್ತು. ಮೊಬೈಲ್‌ಗೆ ಅಥವಾ ಲ್ಯಾಂಡ್‌ಲೈನ್‌ಗೆ ಮಾಡಲಾಗಿತ್ತೆ ? ಎಷ್ಟು ಅವಧಿಯ ಸಂಭಾಷಣೆ ನಡೆಯಿತು, ಎಂಬ ಪ್ರಮುಖ ಘಟನೆಗಳು ತಮಗೆ ನೆನಪಿನಲ್ಲಿಲ್ಲವೆಂದು ಹಾಗೂ ಅಂದಿನ Call details ಅನ್ನು ಸಂಗ್ರಹಿಸಿರುವುದಿಲ್ಲವೆಂದು ಸಾಕ್ಷಿದಾರರು ಸಾಭೀತು ಪಡಿಸಿರುತ್ತಾರೆ.

(3) ಸರ್ಕಾರದ ಅಧಿಕೃತ ಜ್ಞಾಪನಾ ಸಂಖ್ಯೆ : ಸಿಆಸುಇ 12 ಸೇಇವಿ 2003, ದಿನಾಂಕ : 11–09–2003ರ ಸೂಚನೆ ಪ್ರಕಾರ ವಿಚಾರಣೆಯನ್ನು 9 ತಿಂಗಳೊಳಗಾಗಿ ಪೂರೈಸಿ ಅಂತಿಮ ಆದೇಶವನ್ನು ಹೊರಡಿಸಬೇಕಾಗಿದ್ದು, ಪ್ರಸ್ತುತ ಪ್ರಕರಣದ ವಿಚಾರಣೆಗೆ ದಿನಾಂಕ : 23–08–2011ರಂದು ವಿಚಾರಣಾಧಿಕಾರಿಯನ್ನು ನೇಮಿಸಿ ಆದೇಶ ಹೊರಡಿಸಲಾಗಿದೆ. ಅಂತಿಮ ಆದೇಶವನ್ನು ದಿನಾಂಕ : 07–02–2013ರಂದು ಹೊರಡಿಸಲಾಗಿದೆ. ಆದ್ದರಿಂದ, ಸದರಿ ಸೂಚನೆಗಳು ಪಾಲನೆಯಾಗಿರುವುದಿಲ್ಲ.

ಮೇಲೆ ಓದಲಾದ ಕ್ರಮ ಸಂಖ್ಯೆ : 4 ರಲ್ಲಿ ಓದಲಾದ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರ ದಿನಾಂಕ :08–07–2013ರ ಪತ್ರದಲ್ಲಿ ಆರೋಪಿತ ಅಧಿಕಾರಿಯ ಮೇಲ್ಮನವಿಯಲ್ಲಿ ಪ್ರಸ್ತಾಪಿಸಿರುವ ವಿಷಯವು ತಪ್ಪು ಮಾಹಿತಿಯಿಂದ ಕೂಡಿದ್ದು, ನ್ಯಾಯೋಚಿತವಾಗಿರುವುದಿಲ್ಲ. ವಿಚಾರಣೆ ಮುಗಿದ ನಂತರ ಸರ್ಕಾರಕ್ಕೆ ಮತ್ತು ಶಿಸ್ತು ಪ್ರಾಧಿಕಾರಕ್ಕೆ ಮಾತ್ರ ತಿಳಿಸಲು ಮಾತ್ರ ಯೋಗ್ಯವಾಗಿರುತ್ತದೆ. ಫೋನ್ ಕಾಲ್ ಅಥವಾ ದಾಖಲಾತಿ ಒದಗಿಸದೇ ಇರುವ ಕುರಿತು ಸರ್ಕಾರದ ಪರವಾಗಿ ಒಬ್ಬ ಜವಾಬ್ದಾರಿಯುತ ಅಧಿಕಾರಿಯು ವಿಚಾರಣಾಧಿಕಾರಿಯ ಮುಂದೆ ಬಂದು ಸಾಕ್ಷ್ಯ ನುಡಿದಿದ್ದನ್ನು ಗಣನೆಗೆ ತೆಗೆದುಕೊಂಡು ವಿಚಾರಣಾಧಿಕಾರಿಯು ವಿಚಾರಣೆಯನ್ನು ಮುಕ್ತಾಯಗೊಳಿಸಿರುತ್ತಾರೆ. ಆದ್ದರಿಂದ, ಅಪೀಲುದಾರರು ಪ್ರಸ್ತಾಪಿಸಿರುವ ಅಂಶಗಳು ನಿಜವಾಗಿರುವುದಿಲ್ಲ.

ಸಾಕ್ಷಿದಾರರಾದ ಶ್ರೀ ಎ.ಎ. ಪಾರಶೆಟ್ಟಿ ಇವರನ್ನು ಕಾಲಾವಧಿ ಮುಗಿದ ನಂತರ ವಿಚಾರಣೆ ಮಾಡಿರುವುದು ಯೋಗ್ಯವಾಗಿರುವುದಿಲ್ಲವೆಂಬ ಅಪೀಲುದಾರರು ಮೇಲ್ಮನವಿಯಲ್ಲಿ ಪ್ರಸ್ತಾಪಿಸಿರುವುದಕ್ಕೆ ಸಂಬಂಧಿಸಿದಂತೆ ಅರ್ಜಿದಾರರು ಸಲ್ಲಿಸಿದ ಪ್ರಿಸೈಡಿಂಗ್ ಆಫೀಸರ್ ಇವರ ಅರ್ಜಿಯನ್ನು ಅವಲೋಕಿಸಿ, ದಿನಾಂಕ : 30–03–2012 ರಂದು ಒಂದು ಲಿಖಿತ ಆದೇಶವನ್ನು ನೀಡಿದ್ದಾಗಿರುತ್ತದೆ. ಆದ್ದರಿಂದ, ಈ ಕುರಿತು ಮೇಲ್ಮನವಿದಾರ ಹೇಳಿಕೆ ಸರಿ ಇರುವುದಿಲ್ಲ. ಈ ಕಾರಣಗಳಿಂದಾಗಿ ಈ ಪ್ರಕರಣದಲ್ಲಿ ಆರೋಪವನ್ನು ಸ್ಥಿರೀಕರಿಸುವ ಪೂರ್ವದಲ್ಲಿ ವಿಚಾರಣಾಧಿಕಾರಿಯು ಎಲ್ಲಾ ಸಾಕ್ಷಿಗಳನ್ನು ಮತ್ತು ಎಲ್ಲಾ ದಸ್ತಾವೇಜುಗಳನ್ನು ವಿಚಾರಣೆ ಹಾಗೂ ಪಾಟೀ ಸವಾಲು ಮಾಡಿದ ನಂತರ ಸರಿಯಾಗಿ ಅವಲೋಕಿಸಿ ವಿಚಾರಣಾ ವರದಿ ನೀಡಿದ್ದು, ಆ ನಂತರ ಶಿಸ್ತು ಪ್ರಾಧಿಕಾರವು ಅದನ್ನು ಅವಲೋಕಿಸಿ ಕಾನೂನು ರೀತ್ಯಾ ಆದೇಶ ಹೊರಡಿಸಿದೆ. ಆದ್ದರಿಂದ, ಮೇಲ್ಮನವಿಯಲ್ಲಿ ತಿಳಿಸಿರುವ ಅಂಶಗಳು ಸರಿಯಾಗಿರದೇ ವಿಚಾರಣಾಧಿಕಾರಿಯ ವರದಿ ಮತ್ತು ಶಿಸ್ತು ಪ್ರಾಧಿಕಾರದ ಆದೇಶ ಎರಡೂ ಆದೇಶಗಳು ಕಾನೂನು ಬದ್ಧವಾಗಿರುತ್ತದೆ ಎಂದು ಮೇಲ್ಮನವಿ ಪ್ರಾಧಿಕಾರವಾದ ಸರ್ಕಾರಕ್ಕೆ ವಕಾಲತ್ತನ್ನು ಸಲ್ಲಿಸಿರುತ್ತಾರೆ.

ಆಪಾದಿತ ಅಧಿಕಾರಿ ಮತ್ತು ಶಿಸ್ತು ಪ್ರಾಧಿಕಾರವು ನೀಡಿರುವ ದಾಖಲೆಗಳನ್ನು ಪರಿಶೀಲಿಸಲಾಗಿ : – ಆಪಾದಿತ ನೌಕರರ ವಿರುದ್ಧ ವಿಚಾರಣಾ ವರದಿಯನ್ನು ವಿಚಾರಣಾಧಿಕಾರಿಯವರಿಂದ ಸ್ವೀಕರಿಸಿದ ನಂತರ ಶಿಸ್ತು ಪ್ರಾಧಿಕಾರವು ದಂಡನೆಯನ್ನು ವಿಧಿಸುವ ಪೂರ್ವದಲ್ಲಿ ಸರ್ವೋಚ್ಚ ನ್ಯಾಯಾಲಯದ ತೀರ್ಪಿನನುಸಾರ 2ನೇ ಕಾರಣ ಕೇಳುವ ಸೂಚನಾ ಪತ್ರದೊಂದಿಗೆ ವಿಚಾರಣಾ ವರದಿಯ ಪ್ರತಿಯನ್ನು ಆಪಾದಿತರಿಗೆ ಒದಗಿಸುವುದನ್ನು ಕಡ್ಡಾಯವಾಗಿದ್ದು, ಸದರಿ ಪ್ರಕರಣದಲ್ಲಿ ಶಿಸ್ತುಪ್ರಾಧಿಕಾರವು ಆಪಾದಿತರಿಗೆ ವಿಚಾರಣಾ ವರದಿಯ ಪ್ರತಿಯೊಂದಿಗೆ 2ನೇ ಕಾರಣ ಕೇಳುವ ಸೂಚನಾ ಪತ್ರವನ್ನು ನೀಡದೇ ದಂಡನಾದೇಶವನ್ನು ಹೊರಡಿಸಿರುವುದು ನಿಯಮಬಾಹಿರವೆಂದು ಮನಗಂಡಿದೆ.

ಆದಾಗ್ಯೂ 2ನೇ ಆರೋಪವು ಸಾಬೀತಾಗಿರುವುದರಿಂದ, ಆರೋಪಿತ ಅಧಿಕಾರಿರವರು ಎಸಗಿರುವ ಕರ್ತವ್ಯಲೋಪ ಹಾಗೂ ವಿಧಿಸಲಾಗಿರುವ ದಂಡನೆಯ ಸ್ವರೂಪವನ್ನು ಅವಲೋಕಿಸಿ ದಂಡನೆಯು ತೀವ್ರತರವಾದುದ್ದನ್ನು ಮನಗಂಡು, ಸದರಿ ಅಧಿಕಾರಿಯವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 8 (II)ರ ಅಡಿಯಲ್ಲಿ ವಾಗ್ದಂಡನೆ (Censured) ಯನ್ನು ವಿಧಿಸಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಒಇ 255 ಪಿಪಿಇ 2013, ಬೆಂಗಳೂರು, ದಿನಾಂಕ : 01ನೇ ಅಕ್ಟೋಬರ್ 2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಎಸ್. ಮಹದೇವಸ್ವಾಮಿ, ಸಹಾಯಕ ಸರ್ಕಾರಿ ಅಭಿಯೋಜಕರು, ಅಧಿಕ ಸಿ.ಜೆ. (ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಮದ್ದೂರು ಇವರ ವಿರುದ್ಧದ ಇಲಾಖಾ ವಿಚಾರಣೆ ಸಂಬಂಧದಂತೆ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಮತ್ತು ಶಿಸ್ತು ಪ್ರಾಧಿಕಾರ, ಬೆಂಗಳೂರು ಇವರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 8(III) ರ ಅನುಸಾರ ಮುಂದಿನ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ಸಹಿತವಾಗಿ (With Cumulative effect) ತಡೆಹಿಡಿದು ಹೊರಡಿಸಿರುವ ದಂಡನಾದೇಶವನ್ನು ಮಾರ್ಪಡಿಸಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 8(II) ರ ಅನುಸಾರ ವಾಗ್ದಂಡನೆಯನ್ನು (Censured) ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ದೇವೆಂದ್ರಪ್ಪ ಕಟ್ಟಿಮನಿ**

PR. 1097

ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–ಬಿ).

## ಒಳಾಡಳಿತ ಸಚಿವಾಲಯ

**ವಿಷಯ** : ಸಿಟಿ ಸಿವಿಲ್ ನ್ಯಾಯಾಲಯ ಬೆಂಗಳೂರು ಇಲ್ಲಿ ವಕೀಲರು, ಮಾಧ್ಯಮ ಪ್ರತಿನಿಧಿಗಳು ಮತ್ತು ಪೊಲೀಸ್ ನಡುವೆ ನಡೆದ ಘರ್ಷಣೆ ಕುರಿತು ನ್ಯಾ. ಮೂ. ಶ್ರೀ ಆರ್.ಜಿ. ವೈದ್ಯನಾಥ ವಿಚಾರಣಾ ಆಯೋಗದ ಮುಂದೆ ಸರ್ಕಾರದ ಪರವಾಗಿ ವಾದ ಮಂಡಿಸಿದ ಶ್ರೀ ಜಿ.ಕೆ. ಬೇಕಲ್, ವಕೀಲರು (ನಿವೃತ್ತ ಉಪ ಪೊಲೀಸ್ ಆಯುಕ್ತರು), ಬೆಂಗಳೂರು ಇವರಿಗೆ ಸಂಭಾವನೆ ಮಂಜೂರು ಮಾಡುವ ಕುರಿತು.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 4 ಪಿಸಿಇ 2012, ದಿನಾಂಕ : 09–03–2012.
2. ದಿನಾಂಕ : 13–08–2012ರ ಸರ್ಕಾರದ ಅಧಿಸೂಚನೆ ಸಂಖ್ಯೆ : ಹೆಚ್‌ಡಿ 11 ಪಿಸಿಇ 2012,
3. ಶ್ರೀ ಜಿ.ಕೆ. ಬೇಕಲ್, ವಕೀಲರು, ನಿವೃತ್ತ ಉಪ ಪೊಲೀಸ್ ಆಯುಕ್ತರು, ಬೆಂಗಳೂರು ಇವರ ಮನವಿ ದಿನಾಂಕ : 30–09–2013.

**ಪ್ರಸ್ತಾವನೆ :**

ದಿನಾಂಕ : 02–03–2012 ರಂದು ಬೆಂಗಳೂರು ನಗರದ ಸಿವಿಲ್ ನ್ಯಾಯಾಲಯದ ಆವರಣದಲ್ಲಿ ವಕೀಲರು, ಮಾಧ್ಯಮ ಪ್ರತಿನಿಧಿಗಳು ಮತ್ತು ಪೊಲೀಸ್ ನಡುವೆ ನಡೆದ ಘಟನೆಯ ಕುರಿತು ಕೂಲಂಕಷವಾಗಿ ತನಿಖೆ ನಡೆಸಲು ನ್ಯಾಯಮೂರ್ತಿ ಶ್ರೀ ಆರ್.ಜಿ. ವೈದ್ಯನಾಥ ಆಯೋಗವನ್ನು ಮೇಲೆ ಓದಲಾದ (1)ರ ಆದೇಶದಲ್ಲಿ ನೇಮಿಸಲಾಗಿದೆ.

ಶ್ರೀ ಜಿ.ಕೆ. ಬೇಕಲ್, ವಕೀಲರು (ನಿವೃತ್ತ ಉಪ ಪೋಲೀಸ್ ಆಯುಕ್ತರು) ಬೆಂಗಳೂರು ಅವರನ್ನು ನ್ಯಾಯಮೂರ್ತಿ ಶ್ರೀ ಆರ್.ಜಿ. ವೈದ್ಯನಾಥ ವಿಚಾರಣಾ ಆಯೋಗದ ಮುಂದೆ ಸರ್ಕಾರದ ಪರವಾಗಿ ವಾದಿಸಲು ಮೇಲೆ ಓದಲಾದ (2)ರ ಆದೇಶದಲ್ಲಿ ನೇಮಕ ಮಾಡಲಾಗಿದೆ.

ಶ್ರೀ ಜಿ.ಕೆ. ಬೇಕಲ್, ವಕೀಲರು, ಬೆಂಗಳೂರು ಇವರು ಸರ್ಕಾರದ ಪರವಾಗಿ ದಿನಾಂಕ : 02–09–2013, 03–09–2013, 04–09–2013, 05–09–2013, 11–09–2013, 12–09–2013, 13–09–2013, 19–09–2013, 20–09–2013, 21–09–2013, 23–09–2013, 24–09–2013, 25–09–2013 & 26–09–2013, 14 ಮಹತ್ವದ ದಿನಗಳು ವಾದಿಸಿದ ಸಲುವಾಗಿ ಸಂಭಾವನೆಯಾಗಿ ಒಟ್ಟು ರೂ. 1,40,000/– (ಒಂದು ಲಕ್ಷದ ನಲವತ್ತು ಸಾವಿರಗಳು ಮಾತ್ರ) ಗಳ ಮೊತ್ತವನ್ನು ಮಂಜೂರು ಮಾಡುವಂತೆ ಮೇಲೆ ಓದಲಾದ (3)ರ ಪತ್ರದಲ್ಲಿ ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಹೆಚ್‌ಡಿ 11 ಪಿಸಿಇ 2012, ಬೆಂಗಳೂರು, ದಿನಾಂಕ : 21ನೇ ಅಕ್ಟೋಬರ್, 2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಜಿ.ಕೆ. ಬೇಕಲ್, ವಕೀಲರು (ನಿವೃತ್ತ ಉಪ ಪೋಲೀಸ್ ಆಯುಕ್ತರು), ಬೆಂಗಳೂರು ಇವರಿಗೆ ಈ ಕೆಳಕಂಡಂತೆ ಸಂಭಾವನೆಯನ್ನು ಮಂಜೂರು ಮಾಡಲಾಗಿದೆ.

| ಕ್ರಮ ಸಂಖ್ಯೆ | ಸಂಭಾವನೆಯ ವಿವರ | ಮೊತ್ತ ರೂ. |
|---|---|---|
| 1. | Effective hearing (14 days) dated, 02-09-2013, 03-09-2013, 04-09-2013, 05-09-2013, 11-09-2013, 12-09-2013, 13-09-2013, 19-09-2013, 20-09-2013, 21-09-2013, 23-09-2013, 24-09-2013, 25-09-2013 & 26-09-2013, @ Rs. 10,000/- per day | 1,40,000–00 |
| | ಒಟ್ಟು ಮೊತ್ತ (ಒಂದು ಲಕ್ಷದ ನಲವತ್ತು ಸಾವಿರಗಳು ಮಾತ್ರ) | 1,40,000–00 |

1. ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ **"2070–00–105–0–02–059 ವಿಶೇಷ ತನಿಖಾ ಆಯೋಗಗಳು"** ಅಡಿಯಲ್ಲಿ ಭರಿಸತಕ್ಕದ್ದು. ಸದರಿ ಲೆಕ್ಕ ಶೀರ್ಷಿಕೆಯಡಿಯಲ್ಲಿ ಬಿಡುಗಡೆಯಾದ ಹಣವನ್ನು ಹಿಂಪಡೆದು ವಿತರಿಸಲು ಸರ್ಕಾರದ ಅಧೀನ ಕಾರ್ಯದರ್ಶಿ (ಕಾನೂನು ಮತ್ತು ಸುವ್ಯವಸ್ಥೆ), ಒಳಾಡಳಿತ ಇಲಾಖೆ ಇವರನ್ನು ಹಣ ಹಿಂಪಡೆಯುವ ಮತ್ತು ವಿತರಿಸುವ ಅಧಿಕಾರಿಯನ್ನಾಗಿ ನೇಮಿಸಲಾಗಿದೆ.
2. ಈ ಆದೇಶವನ್ನು ಆರ್ಥಿಕ ಇಲಾಖೆ ಆದೇಶ ಸಂಖ್ಯೆ : ಆಇ 3 ಟಿಎಫ್‌ಪಿ 2011, ದಿನಾಂಕ : 27–01–2012 ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳಿಗೆ ಅಧಿಕಾರ ಪ್ರತ್ಯಾಯೋಜಿಸಿದ ರೀತ್ಯಾ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಗೋವಿಂದಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾನೂನು ಮತ್ತು ಸುವ್ಯವಸ್ಥೆ).

**PR. 1107**

**SC-50**

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ :** ರಾಜ್ಯದಲ್ಲಿ ಹೊಸ ಮರಳು ನೀತಿ ಅನ್ವಯ ಲೋಕೋಪಯೋಗಿ ಇಲಾಖೆಯಿಂದ ಮರಳು ಗಣಿಗಾರಿಕೆಯನ್ನು ಅನುಷ್ಠಾನಗೊಳಿಸುತ್ತಿದ್ದು, ತುರ್ತು ಕಾರ್ಯಗಳಿಗಾಗಿ ಜಿಲ್ಲಾಧಿಕಾರಿಗಳ ಕಛೇರಿಗೆ ಅನುದಾನವನ್ನು ನಿಗಧಿಪಡಿಸುವ ಬಗ್ಗೆ.

**ಓದಲಾಗಿದೆ :**

1. ದಿನಾಂಕ : 31–07–2012ರಂದು ಮೈಸೂರು ವಿಭಾಗದ ಜಿಲ್ಲೆಗಳಲ್ಲಿ ಮರಳು ಗಣಿಗಾರಿಕೆ ಅನುಷ್ಠಾನದ ಕುರಿತು ಮಾನ್ಯ ಲೋಕೋಪಯೋಗಿ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಗಳು
2. ದಿನಾಂಕ : 04–01–2013ರಂದು ಅಪರ ಕಾರ್ಯದರ್ಶಿಗಳು, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ರಿವಾಲ್ವಿಂಗ್ ನಿಧಿಯನ್ನು ಉಪಯೋಗಿಸುವ ಕುರಿತು ಮಾರ್ಗಸೂಚಿಗಳನ್ನು ತಯಾರಿಸಲು ನಡೆದ ಸಭೆಯ ನಡವಳಿಗಳು.
3. ಸರ್ಕಾರದ ಆದೇಶ ಸಂಖ್ಯೆ : ಲೋಇ 76 ಬಿಎಂಎಸ್ 2011, ದಿನಾಂಕ : 29–07–2013.

**ಪ್ರಸ್ತಾವನೆ :**

ದಿನಾಂಕ : 31–07–2012 ರಂದು ಮೈಸೂರು ವಿಭಾಗದ ಜಿಲ್ಲೆಗಳಲ್ಲಿ ಮರಳು ಗಣಿಗಾರಿಕೆ ಅನುಷ್ಠಾನದ ಕುರಿತು ಮಾನ್ಯ ಲೋಕೋಪಯೋಗಿ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಮಾನ್ಯ ವಿಧಾನ ಸಭೆಯ ವಿರೋಧ ಪಕ್ಷದ ನಾಯಕರು ಹಾಗೂ ಶ್ರೀ ಹೆಚ್.ಸಿ. ಮಹದೇವಪ್ಪ, ಶಾಸಕರು ಹಾಗೂ ಮೈಸೂರು ವಿಭಾಗದ ವಿವಿಧ ಜಿಲ್ಲೆಯ ಜಿಲ್ಲಾಧಿಕಾರಿಗಳು ಹಾಗೂ ಇತರೆ ಸಂಬಂಧಿಸಿದ ಅಧಿಕಾರಿಗಳು ಹಾಜರಿದ್ದು, ಮರಳು ಗಣಿಗಾರಿಕೆ

ಅನುಷ್ಠಾನಗೊಳಿಸಲು ತುರ್ತಾಗಿ ಕೆಲವೊಂದು ಕಾರ್ಯಗಳಿಗೆ ಹಣದ ಅವಶ್ಯಕತೆ ಇರುತ್ತದೆ. ಆದರೆ ಸಧ್ಯಕ್ಕೆ ಇಂತಹ ಕೆಲಸ ಕಾರ್ಯಗಳಿಗೆ ಖರ್ಚು ಮಾಡಲು ಜಿಲ್ಲಾಧಿಕಾರಿಗಳ ವ್ಯಾಪ್ತಿಯಲ್ಲಿ ಹಣ ಲಭ್ಯವಿರುವುದಿಲ್ಲದ ಕಾರಣ ಜಿಲ್ಲಾಧಿಕಾರಿಗಳ ಮಟ್ಟದಲ್ಲಿ ರಿವಾಲ್ವಿಂಗ್ ನಿಧಿಯನ್ನು ರಚಿಸಲು ತೀರ್ಮಾನಿಸಲಾಗಿತ್ತು.

ಅಪರ ಕಾರ್ಯದರ್ಶಿಗಳು, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ಸಂಬಂಧಪಟ್ಟ ಅಧಿಕಾರಿಗಳೊಂದಿಗೆ ಸಭೆ ನಡೆಸಿ, ಮಾರ್ಗಸೂಚಿಗಳನ್ನು ತಯಾರಿಸಲಾಗಿತ್ತು. ಸದರಿ ಸಭೆಯಲ್ಲಿ ತಯಾರಿಸಿದ ಮಾರ್ಗಸೂಚಿಗಳನ್ವಯ ಆಯಾ ಜಿಲ್ಲಾಧಿಕಾರಿಗಳಿಗೆ ಅಗತ್ಯ ವೆಚ್ಚದ ಸೌಲಭ್ಯಕ್ಕಾಗಿ ಅನುದಾನವನ್ನು ನಿಗದಿಪಡಿಸಿ ಮೇಲೆ ಓದಲಾದ (3)ರಲ್ಲಿ ಆದೇಶಿಸಲಾಗಿತ್ತು.

ಓದಲಾದ (3)ರ ಆದೇಶವನ್ನು ಪರಿಷ್ಕರಿಸಬೇಕಾದ್ದರಿಂದ ಈ ಕೆಳಕಂಡ ಆದೇಶ :–

**ಸರ್ಕಾರಿ ಆದೇಶ ಸಂಖ್ಯೆ : ಲೋಇ 76 ಬಿಎಂಎಸ್ 2011, ಬೆಂಗಳೂರು, ದಿನಾಂಕ : 28–10–2013.**

ಸರ್ಕಾರಿ ಆದೇಶ ಸಂಖ್ಯೆ : ಲೋಇ 76 ಬಿಎಂಎಸ್ 2011, ದಿನಾಂಕ : 29–07–2013ನ್ನು ರದ್ದುಪಡಿಸಿ, ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಮರಳು ಗಣಿಗಾರಿಕೆಯ ಅನುಷ್ಠಾನದ ಸಂಬಂಧ ಅಗತ್ಯ ವೆಚ್ಚದ ಸೌಲಭ್ಯಕ್ಕಾಗಿ ಆಯಾಯ ಜಿಲ್ಲೆಗಳ ಎದುರಿಗೆ ತೋರಿಸಿರುವ ಮೊತ್ತವನ್ನು ನಿಗದಿಪಡಿಸಲಾಗಿದೆ.

| ಕ್ರ. ಸಂ. | ಜಿಲ್ಲೆ | ಪ್ರಾಧೀಕರಿಸಿದ ಮೊತ್ತ (ರೂ. ಲಕ್ಷಗಳಲ್ಲಿ) |
|---|---|---|
| 1. | ಚಿತ್ರದುರ್ಗ | 10.00 |
| 2. | ಕೋಲಾರ | 10.00 |
| 3. | ಶಿವಮೊಗ್ಗ | 10.00 |
| 4. | ತುಮಕೂರು | 5.00 |
| 5. | ಮೈಸೂರು | 10.00 |
| 6. | ಚಿಕ್ಕಮಗಳೂರು | 5.00 |
| 7. | ಹಾಸನ | 10.00 |
| 8. | ಕೊಡಗು | 5.00 |
| 9. | ಮಂಡ್ಯ | 10.00 |
| 10. | ಬೆಳಗಾವಿ | 2.00 |
| 11. | ಬಿಜಾಪುರ | 2.00 |
| 12. | ಗುಲ್ಬರ್ಗಾ | 5.00 |
| 13. | ಬಳ್ಳಾರಿ | 10.00 |
| 14. | ರಾಯಚೂರು | 10.00 |
| 15. | ಯಾದಗಿರಿ | 5.00 |
| 16. | ದಾವಣಗೆರೆ | 5.00 |
| 17. | ಚಿಕ್ಕಬಳ್ಳಾಪುರ | 2.00 |
| 18. | ಚಾಮರಾಜನಗರ | 10.00 |
| 19. | ಬಾಗಲಕೋಟೆ | 10.00 |
| 20. | ಗದಗ | 10.00 |
| 21. | ಹಾವೇರಿ | 10.00 |
| 22. | ಕೊಪ್ಪಳ | 2.00 |
| | **ಒಟ್ಟು** | **158.00** |

ಉಳಿದ 8 ಜಿಲ್ಲೆಗಳಲ್ಲಿ ಮರಳು ಗಣಿಗಾರಿಕೆ ಇಲ್ಲದೆ ಇರುವುದರಿಂದ ಮೊತ್ತ ನಿಗದಿ ಮಾಡಿರುವುದಿಲ್ಲ.

ಮೇಲ್ಕಾಣಿಸಿದ ಜಿಲ್ಲೆಗಳಲ್ಲಿ ಅಗತ್ಯ ವೆಚ್ಚದ ಸೌಲಭ್ಯಕ್ಕಾಗಿ ನಿಗದಿಪಡಿಸಿರುವ ಮೊತ್ತವನ್ನು ಈ ಕೆಳಕಂಡ ಕಾರ್ಯಗಳ ವೆಚ್ಚಕ್ಕೆ ಜಿಲ್ಲಾಧಿಕಾರಿಗಳು ಭರಿಸಬಹುದಾಗಿದೆ.

1. ಮರಳು ಗಣಿಗಾರಿಕೆಯಲ್ಲಿ ತೊಡಗಿದ್ದ ಯಂತ್ರೋಪಕರಣಗಳನ್ನು, ಬೋಟ್‌ಗಳನ್ನು ಜಪ್ತಿ ಮಾಡಿದಾಗ ಅಂತಹವುಗಳನ್ನು ಸಾಗಿಸಲು ಹಾಗೂ ಅನಧಿಕೃತ ಮರಳನ್ನು ಲೋಡ್ ಮಾಡುವಾಗ ಹಿಡಿದ ವಾಹನಗಳನ್ನು ಸಾಗಿಸಲು ಖರ್ಚಾಗುವ ಮೊತ್ತವನ್ನು ಭರಿಸಲು ;
2. ಮರಳು ಗಣಿಗಾರಿಕೆಯಲ್ಲಿ ಅನುಷ್ಠಾನಗೊಳಿಸುವಾಗ ಬರಬಹುದಾದ ಅನಿರೀಕ್ಷಿತ ಖರ್ಚುಗಳಿಗೆ ;
3. ಅಕ್ರಮ ಗಣಿಗಾರಿಕೆ ನಡೆಸುತ್ತಿದ್ದವರ ಮೇಲೆ ಕ್ರಮ ಜರುಗಿಸಲು ಖರ್ಚಾಗಬಹುದಾದ ಮೊತ್ತ ;
4. ಅಕ್ರಮ ಗಣಿಗಾರಿಕೆ ತಡೆಯಲು ಗಸ್ತು ತಿರುಗುವ ವಾಹನಗಳ ವೆಚ್ಚ ಭರಿಸಲು ;

5. ಜಪ್ತಿ ಮಾಡಿದ ವಾಹನ, ಯಂತ್ರೋಪಕರಣ, ಮರಳನ್ನು ಸಾಗಿಸಲು ಉಪಯೋಗಿಸಿದ ಮಾನವ ಶಕ್ತಿಗೆ ಒದಗಬಹುದಾದ ಖರ್ಚು ಭರಿಸಲು;

ಜಿಲ್ಲಾಧಿಕಾರಿಗಳು ಅವರಿಗೆ ನಿಗಧಿಪಡಿಸಿದ ಮೊತ್ತಕ್ಕೆ ಸೀಮಿತಗೊಳಿಸಿ ಹಣವನ್ನು ಖಜಾನೆ ಮೂಲಕ ಡ್ರಾ ಮಾಡಬಹುದಾಗಿದೆ. ಪ್ರತಿಯೊಂದು ಜಿಲ್ಲಾಧಿಕಾರಿಗಳಿಗೆ ನಿಗಧಿಪಡಿಸಿರುವ ಮೊತ್ತದ ಶೇಕಡಾ 75 ರಷ್ಟು ಹಣ ವೆಚ್ಚವಾದ ಕೂಡಲೇ ಉಪಯೋಗದ ಪ್ರಮಾಣಪತ್ರದೊಂದಿಗೆ ಆಯಾ ಜಿಲ್ಲಾಧಿಕಾರಿಗಳು ಹೆಚ್ಚುವರಿ ಹಣ ಬಿಡುಗಡೆಗಾಗಿ ಲೋಕೋಪಯೋಗಿ ಇಲಾಖೆಗೆ ಪ್ರಸ್ತಾವನೆ ಸಲ್ಲಿಸಬಹುದಾಗಿದೆ. ಜಿಲ್ಲಾಧಿಕಾರಿಗಳು ಯಾವ ಉದ್ದೇಶಕ್ಕಾಗಿ ಹಣ ಪಡೆಯುತ್ತಾರೋ ಅದೇ ಉದ್ದೇಶಕ್ಕಾಗಿ ಸದರಿ ಹಣವನ್ನು ವೆಚ್ಚ ಮಾಡುವುದು.

ಅಗತ್ಯ ವೆಚ್ಚದ ಸೌಲಭ್ಯಕ್ಕಾಗಿ ನಿಗಧಿಪಡಿಸಿರುವ ವೆಚ್ಚವನ್ನು ಲೆಕ್ಕಶೀರ್ಷಿಕೆ : 2059–80–800–0–06–051 ಮರಳು ಗಣಿಗಾರಿಕೆಯ ಆಡಳಿತ–ಸಾಮಾನ್ಯ ವೆಚ್ಚಗಳು (ಯೋಜನೇತರ) ಅಡಿಯಲ್ಲಿ ಒದಗಿಸುವ ಅನುದಾನದಲ್ಲಿ ರಭಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿಗಳ ಸಂಖ್ಯೆ : ಲೋಇ 265 ಆಕೋ–1/2013, ದಿನಾಂಕ : 03–07–2013 ಹಾಗೂ ಲೋಇ 453 ಆಕೋ–1/2013, ದಿನಾಂಕ : 10–10–2013 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಎಂ. ವೀರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು
ಒಳನಾಡು ಜಲಸಾರಿಗೆ ಇಲಾಖೆ (ಕಟ್ಟಡಗಳು).

PR. 1197

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ** : ಮಂಗಳೂರಿನ ಹ್ಯಾಟ್‌ಹಿಲ್‌ನಲ್ಲಿ ನ್ಯಾಯಾಂಗ ಇಲಾಖೆಯ ಅಧಿಕಾರಿಗಳ ಬಹುಮಹಡಿ ವಸತಿ ಗೃಹಗಳ (12 ಸಂಖ್ಯೆ) ಕಟ್ಟಡ ನಿರ್ಮಾಣದ ಕಾಮಗಾರಿಯ ರೂ. 820.00 ಲಕ್ಷಗಳ ಅಂದಾಜು ಪತ್ರಿಕೆಗೆ ಆಡಳಿತಾತ್ಮಕ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ :** 1. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ), ಬೆಂಗಳೂರು ಇವರ ಪತ್ರ ಸಂಖ್ಯೆ : ಮು.ಅ/ಸಂಕದ/ಸ.ಇಂ–1/2013–14, ದಿನಾಂಕ : 17–07–2013.

2. ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಮಾನ್ಯ ಉಚ್ಚ ನ್ಯಾಯಾಲಯ, ಬೆಂಗಳೂರು ಇವರ ಪತ್ರ ಸಂಖ್ಯೆ : ಎಲ್‌ಸಿಬಿಎಸ್ 66/04, ದಿನಾಂಕ : 27–06–2013.

**ಪ್ರಸ್ತಾವನೆ :**

ಮಂಗಳೂರಿನ ಹ್ಯಾಟ್‌ಹಿಲ್‌ನಲ್ಲಿ ನ್ಯಾಯಾಂಗ ಇಲಾಖೆಯ ಅಧಿಕಾರಿಗಳ ಬಹುಮಹಡಿ ವಸತಿಗೃಹಗಳ (12 ಸಂಖ್ಯೆ) ಕಟ್ಟಡ ನಿರ್ಮಾಣದ ಕಾಮಗಾರಿಯು ಲೆಕ್ಕಶೀರ್ಷಿಕೆ 4216 ವಸತಿ ಯೋಜನೆಯಡಿಯಲ್ಲಿ 2012–13ನೇ ಸಾಲಿನ ಅಪೆಂಡಿಕ್ಸ್–'ಇ' ನಲ್ಲಿ ಕಾಮಗಾರಿಯ ಅಂದಾಜು ಮೊತ್ತ ರೂ. 820.00 ಲಕ್ಷಗಳಿಗೆ ರೂ. 246.00 ಲಕ್ಷಗಳ ಅನುದಾನದೊಂದಿಗೆ ಈ ಕಾಮಗಾರಿ ಸೇರ್ಪಡೆಗೊಂಡಿದೆ. ಈ ಕಾಮಗಾರಿಯ ಅಂದಾಜು ಪಟ್ಟಿಗೆ ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರುರವರು ಮೇಲೆ ಓದಲಾದ (2) ರ ಪತ್ರದಲ್ಲಿ ಮೇಲು ಸಹಿ ಮಾಡಿರುತ್ತಾ, ಎಂದು ತಿಳಿಸಿ ಮೇಲ್ಕಂಡ ಕಾಮಗಾರಿಗೆ ಆಡಳಿತಾತ್ಮಕ ಅನುಮೋದನೆ ನೀಡುವಂತೆ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರು ಮೇಲೆ ಓದಲಾದ (1)ರ ಪತ್ರದಲ್ಲಿ ಕೋರಿರುತ್ತಾರೆ. ವಿದ್ಯುತ್ಶಕ್ತಿ, ನೀರು ಪೂರೈಕೆ ಮತ್ತು ನೈರ್ಮಲೀಕರಣ ಕಾಮಗಾರಿ, 3 ಮೆಕಾನಿಕ್ ಲಿಫ್ಟ್‌ಗಳು, ಅಗ್ನಿ ನಿಯಂತ್ರಣ ಸೌಲಭ್ಯ, ಸೋಲಾರ್ ಸಿಸ್ಟಮ್, ಮಳೆ ನೀರು ಸಂಗ್ರಹಣೆ ಪೀಠೋಪಕರಣಗಳ ಪೂರೈಕೆ ಇತ್ಯಾದಿಗಳಿಗೆ ಸದರಿ ಕಾಮಗಾರಿಯಲ್ಲಿ ಅವಕಾಶ ಕಲ್ಪಿಸಲಾಗಿದೆ.

ಮೇಲ್ಕಂಡ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಲೋಇ 120 ಬಿಜೆಪಿ 2013, ಬೆಂಗಳೂರು, ದಿನಾಂಕ : 31ನೇ ಅಕ್ಟೋಬರ್ 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಮಂಗಳೂರಿನ ಹ್ಯಾಟ್‌ಹಿಲ್‌ನಲ್ಲಿ ನ್ಯಾಯಾಂಗ ಇಲಾಖೆಯ ಅಧಿಕಾರಿಗಳ ಬಹುಮಹಡಿ ವಸತಿಗೃಹಗಳ (12 ಸಂಖ್ಯೆ) ಕಟ್ಟಡ ನಿರ್ಮಾಣದ ಕಾಮಗಾರಿಗೆ 2012–13ನೇ ಸಾಲಿನ ಅಪೆಂಡಿಕ್ಸ್–'ಇ' ನಲ್ಲಿ ಲೆಕ್ಕಶೀರ್ಷಿಕೆ 4216 ವಸತಿ ಯೋಜನೆಯಡಿಯಲ್ಲಿ ಅಂದಾಜು ಮೊತ್ತ ರೂ. 820.00 ಲಕ್ಷ (ರೂಪಾಯಿ ಎಂಟು ನೂರ ಇಪ್ಪತ್ತು ಲಕ್ಷಗಳು ಮಾತ್ರ) ಗಳ ಅನುದಾನ ಒದಗಿಸಿರುವುದರಿಂದ ಆಡಳಿತಾತ್ಮಕ ಅನುಮೋದನೆ ನೀಡಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಎಂ. ವೀರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು
ಒಳನಾಡು ಜಲಸಾರಿಗೆ ಇಲಾಖೆ (ಕಟ್ಟಡಗಳು).

PR. 1198

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ :** ಧಾರವಾಡ ಜಿಲ್ಲೆ, ಹುಬ್ಬಳ್ಳಿಯ ಎಂ. ತಿಮ್ಮಸಾಗರ ಗ್ರಾಮದ ಸರ್ವೆ ನಂ. 34/2 ರಲ್ಲಿ ಹೊಸ ನ್ಯಾಯಾಲಯ ಸಂಕೀರ್ಣ ಕಟ್ಟಡ ನಿರ್ಮಾಣ ಕಾಮಗಾರಿಯ ರೂ. 7500.00 ಲಕ್ಷಗಳ ಅಂದಾಜು ಪತ್ರಿಕೆಗೆ ಆಡಳಿತಾತ್ಮಕ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಇವರ ಪತ್ರ ಸಂಖ್ಯೆ : ಮು.ಇಂ(ಉ)/ತಾಂಸ-1/ಸಇಂ-2/ಕಟ್ಟಡ/2013-14, 5547, ದಿನಾಂಕ : 07-10-2013.

**ಪ್ರಸ್ತಾವನೆ :**

ಧಾರವಾಡ ಜಿಲ್ಲೆ, ಹುಬ್ಬಳ್ಳಿಯ ಎಂ. ತಿಮ್ಮಸಾಗರ ಗ್ರಾಮದ ಸರ್ವೆ ನಂ. 34/2 ರಲ್ಲಿ ಹೊಸ ನ್ಯಾಯಾಲಯ ಸಂಕೀರ್ಣ ಕಟ್ಟಡ ನಿರ್ಮಾಣ ಮಾಡಲು 5 ಎಕರೆ 15 ಗುಂಟೆ ಜಮೀನನ್ನು ಭೂ ಕಂದಾಯ ಇಲಾಖೆಯು ಸ್ವಾಧೀನಪಡಿಸಿಕೊಂಡು ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಗೆ ಹಸ್ತಾಂತರಿಸಿರುತ್ತಾರೆ. ಅದರಂತೆ ಹೊಸ ನ್ಯಾಯಾಲಯ ಸಂಕೀರ್ಣ ಕಟ್ಟಡ ನಿರ್ಮಾಣ ಮಾಡುವ ಕಾಮಗಾರಿಗೆ ರೂ. 7500.00 ಲಕ್ಷಗಳ ಅಂದಾಜು ಪತ್ರಿಕೆ ತಯಾರಿಸಿ, ಅನುದಾನ ಒದಗಿಸಿ ಆಡಳಿತಾತ್ಮಕ ಅನುಮೋದನೆ ನೀಡುವಂತೆ ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ ಇವರು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸದರಿ ಕಟ್ಟಡದ ಕಾಮಗಾರಿಯ ಅಂದಾಜು ಪಟ್ಟಿಯಲ್ಲಿ ನ್ಯಾಯಾಲಯ ಇಲಾಖೆಯ ಬೇಡಿಕೆಗೆ ಅನುಗುಣವಾಗಿ 20 ಕೋರ್ಟ್ ಹಾಲ್ ಹಾಗೂ ಇನ್ನಿತರೆ ಅವಶ್ಯಕ ಕಟ್ಟಡಗಳನ್ನು ಒಳಗೊಂಡ ಸಂಕೀರ್ಣ 7 ಮಹಡಿಗಳನ್ನೊಳಗೊಂಡು (ಬೇಸ್‌ಮೆಂಟ್ + ನೆಲಮಹಡಿ + ಐದು ಮಹಡಿಗಳು) ಕ್ಯಾಂಟೀನ್ ಕಟ್ಟಡ, ಸ್ಟ್ರಾಂಗ್ ರೂಮ್, ವಿದ್ಯುತ್ಛಕ್ತಿ, ನೀರು ಪೂರೈಕೆ ಮತ್ತು ನೈರ್ಮಲೀಕರಣ ಕಾಮಗಾರಿ, ಅಗ್ನಿ ನಿಯಂತ್ರಣ ಸೌಲಭ್ಯ ನಿರ್ಮಿಸಲು, ಪೀಠೋಪಕರಣ ಪೂರೈಸಲು, ರಸ್ತೆ ಮತ್ತು ಕಾಂಪೌಂಡ್ ನಿರ್ಮಾಣ ಮಾಡಲು ಅವಕಾಶ ಕಲ್ಪಿಸಲಾಗಿದೆ.

ಮೇಲ್ಕಂಡ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಲೋಇ 157 ಬಿಜೆಪಿ 2013, ಬೆಂಗಳೂರು, ದಿನಾಂಕ : 31ನೇ ಅಕ್ಟೋಬರ್ 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, 2013-14ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 4059 ನ್ಯಾಯಾಲಯದ ಕಟ್ಟಡಗಳು (ಯೋಜನೆ) ಅಡಿ ಒದಗಿಸಿರುವ ರೂ. 272.00 ಕೋಟಿ ಅನುದಾನದಲ್ಲಿ ಉಳಿತಾಯವಾಗುವ ಅನುದಾನದಿಂದ ಧಾರವಾಡ ಜಿಲ್ಲೆ, ಹುಬ್ಬಳ್ಳಿಯ ಎಂ. ತಿಮ್ಮಸಾಗರ ಗ್ರಾಮದ ಸರ್ವೆ ನಂ. 34/2 ರಲ್ಲಿ ಹೊಸ ನ್ಯಾಯಾಲಯ ಸಂಕೀರ್ಣ ಕಟ್ಟಡ ನಿರ್ಮಾಣ ಕಾಮಗಾರಿಯ ರೂ. 75.00 ಕೋಟಿಗಳ (ಎಪ್ಪತ್ತೈದು ಕೋಟಿ ರೂಪಾಯಿಗಳು ಮಾತ್ರ) ಅಂದಾಜಿಗೆ ಅಪೆಂಡಿಕ್ಸ್-'ಇ' ಗೆ ಸೇರ್ಪಡೆ ಮಾಡುವ ಷರತ್ತಿಗೊಳಪಟ್ಟು ಆಡಳಿತಾತ್ಮಕ ಅನುಮೋದನೆ ನೀಡಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಎಂ. ವೀರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು
ಒಳನಾಡು ಜಲಸಾರಿಗೆ ಇಲಾಖೆ (ಕಟ್ಟಡಗಳು).

**PR. 1199**

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ :** ಕರ್ನಾಟಕ ಉಚ್ಚ ನ್ಯಾಯಾಲಯದ ಕೋರ್ಟ್‌ಹಾಲ್‌ಗಳಿಗೆ ಹವಾನಿಯಂತ್ರಣ ಸೌಲಭ್ಯ ಒದಗಿಸುವ ಕಾಮಗಾರಿಯ ರೂ. 800.00 ಲಕ್ಷಗಳ ಅಂದಾಜು ಪತ್ರಿಕೆಗೆ ಆಡಳಿತಾತ್ಮಕ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ), ಬೆಂಗಳೂರು ಇವರ ಪತ್ರ ಸಂಖ್ಯೆ : ಮು.ಅ/ಸಂಕದ/ತಾಂ.ಸ/ಸ.ಇಂ-5/ಹ.ನಿ./13-14, ದಿನಾಂಕ : 11-06-2013.

**ಪ್ರಸ್ತಾವನೆ :**

ಕರ್ನಾಟಕ ಉಚ್ಚ ನ್ಯಾಯಾಲಯದ ಎಲ್ಲಾ ಕೋರ್ಟ್‌ಹಾಲ್‌ಗಳಲ್ಲಿ ಅತ್ಯಧಿಕ ಜನಸಂದಣೆಯಿಂದ ಕಾರ್ಯ ನಿರ್ವಹಿಸುವುದು ಕಷ್ಟಕರವಾಗಿರುವ ಹಿನ್ನೆಲೆಯಲ್ಲಿ ಉಚ್ಚ ನ್ಯಾಯಾಲಯದ ಗೌರವಾನ್ವಿತ ಮುಖ್ಯ ನ್ಯಾಯಾಧೀಶರು ದಿನಾಂಕ : 03-04-2013ರಂದು ಉಚ್ಚ ನ್ಯಾಯಾಲಯದ ಹಿರಿಯ ನ್ಯಾಯಾಧೀಶರುಗಳು ಹಾಗೂ ಲೋಕೋಪಯೋಗಿ ಇಲಾಖೆಯ ಅಧಿಕಾರಿಗಳೊಂದಿಗೆ ನ್ಯಾಯಾಲಯದ ಕೋರ್ಟ್‌ಹಾಲ್‌ಗಳನ್ನು ಪರಿವೀಕ್ಷಿಸಿ ಎಲ್ಲಾ ಕೋರ್ಟ್‌ಹಾಲ್‌ಗಳಿಗೆ ಹವಾನಿಯಂತ್ರಣ ಸೌಲಭ್ಯವನ್ನು ಒದಗಿಸಲು ತಿಳಿಸಿರುತ್ತಾರೆ. ಅದರಂತೆ ಮಾನ್ಯ ಉಚ್ಚ ನ್ಯಾಯಾಲಯದ ಬಿಲ್ಡಿಂಗ್ ಸಮಿತಿಯು ದಿನಾಂಕ : 09-04-2013ರ ಸಭೆಯಲ್ಲಿ ಸೂಚನೆಯನ್ನು ಅನುಮೋದಿಸಿ ಕೋರ್ಟ್ ಹಾಲ್‌ಗಳಿಗೆ ಹವಾನಿಯಂತ್ರಣ ಸೌಲಭ್ಯವನ್ನು ಒದಗಿಸಲು ಸಹಮತಿಸಲಾಗಿರುತ್ತದೆ.

ಸಭೆಯ ತೀರ್ಮಾದಂತೆ ಉಚ್ಚ ನ್ಯಾಯಾಲಯದ ಎಲ್ಲಾ ಕೋರ್ಟ್‌ಹಾಲ್‌ಗಳಿಗೆ ಕೇಂದ್ರೀಕೃತ ಚಿಲ್ಡ್‌ವಾಟರ್ ಮಾದರಿಯ ಹವಾನಿಯಂತ್ರಣ ಸೌಲಭ್ಯ ಒದಗಿಸುವ ಕಾಮಗಾರಿಗೆ ಪ್ರತಿಷ್ಠಿತ ಕಂಪನಿಯವರಿಂದ ದರಗಳನ್ನು ಪಡೆದು ಅಂದಾಜನ್ನು ತಯಾರಿಸಲಾಗಿದೆ. ಹವಾನಿಯಂತ್ರಣಕ್ಕೆ ಸಂಬಂಧಿಸಿದ ಚಿಲ್ಲರ್‌ಗಳನ್ನು ಮತ್ತು ಸಂಬಂಧಿಸಿದ ಉಪಕರಣಗಳನ್ನು ನ್ಯಾಯಾಲಯದ ಹೊರ ಆವರಣದಲ್ಲಿ ಚಿಲ್ಲರ್‌ಪ್ಲಾಂಟ್ ರೂಂ ನಿರ್ಮಿಸಲು ಉದ್ದೇಶಿಸಲಾಗಿರುತ್ತದೆ. ಪ್ರತಿ ಕೋರ್ಟ್‌ಹಾಲ್‌ನ ಮುಂದೆ 2 ಸಂಖ್ಯೆ ಎ.ಹೆಚ್.ಯು. ಅಳವಡಿಸುವ ಉಪಕರಣದ ವ್ಯವಸ್ಥೆಗೆ ಅವಕಾಶ ಕಲ್ಪಿಸಲಾಗಿದೆ. ಕಲಾಪ ನಡೆಯುವ ಕೋರ್ಟ್‌ಹಾಲ್‌ಗಳಿಗೆ ತಂಪುಹವೆ ಒದಗಿಸಿ ಕಲಾಪವಿಲ್ಲದ ಕೋರ್ಟ್‌ಹಾಲ್‌ಗಳ ಹವಾನಿಯಂತ್ರಣ ವ್ಯವಸ್ಥೆ ನಿಸ್ತೇಜಗೊಳಿಸಿ ವಿದ್ಯುತ್ ಉಳಿತಾಯ ಮಾಡಬಹುದಾಗಿದೆ. ಉಚ್ಚ ನ್ಯಾಯಾಲಯದ ಎಲ್ಲಾ ಕೋರ್ಟ್‌ಹಾಲ್‌ಗಳಿಗೆ ಹವಾನಿಯಂತ್ರಣ ಸೌಲಭ್ಯವನ್ನು ಒದಗಿಸಲು ಸುಮಾರು 629 ಟನ್‌ಗಳ

ಸಾಮರ್ಥ್ಯದ ಹವಾನಿಯಂತ್ರಣ, ಪೂರಕ ವಿದ್ಯುತ್ ಕಾಮಗಾರಿ, ಎಲ್.ಟಿ. ಕೇಬಲಿಂಗ್, ಸ್ವಿಚ್‌ಗೇರ್ ಕಂಟ್ರೋಲ್ ಹಾಗೂ ಇನ್ನಿತರೆ ಅವಶ್ಯಕ ಅಂಶಗಳನ್ನೊಳಗೊಂಡಂತೆ ಅಂದಾಜು ವೆಚ್ಚ ರೂ. 800.00 ಲಕ್ಷಗಳಾಗುತ್ತದೆ. ಈ ಅಂದಾಜನ್ನು ಅಧಿಕೃತ/ನುರಿತ ಸಂಸ್ಥೆಯವರು ಹಾಲಿ ಮಾರುಕಟ್ಟೆ ದರಗಳನ್ವಯ ತಯಾರಿಸಲಾಗಿದೆ. ಈ ಕಾಮಗಾರಿಯನ್ನು 2013–14ನೇ ಸಾಲಿನ ಆಯವ್ಯಯದಲ್ಲಿ ಹೊಸ ಕಾಮಗಾರಿಯನ್ನಾಗಿ ಸೇರಿಸಲಾಗಿದ್ದು, ಕಾಮಗಾರಿಯನ್ನು ಲೆಕ್ಕಶೀರ್ಷಿಕೆ 4059 (ನ್ಯಾಯಾಲಯ ಕಟ್ಟಡಗಳು) ಅಡಿಯಲ್ಲಿ ಕೈಗೆತ್ತಿಕೊಳ್ಳಲು ಉದ್ದೇಶಿಸಲಾಗಿರುವುದರಿಂದ, ಸದರಿ ಕಾಮಗಾರಿಯ ಅಂದಾಜು ವೆಚ್ಚ ರೂ. 800.00 ಲಕ್ಷಗಳಿಗೆ ಆಡಳಿತಾತ್ಮಕ ಅನುಮೋದನೆಯನ್ನು ನೀಡುವಂತೆ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರು ಮೇಲೆ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಲೋಇ 111 ಬಿಜೆಪಿ 2013, ಬೆಂಗಳೂರು, ದಿನಾಂಕ : 31ನೇ ಅಕ್ಟೋಬರ್ 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಉಚ್ಚ ನ್ಯಾಯಾಲಯದ ಕೋರ್ಟ್‌ಹಾಲ್‌ಗಳಿಗೆ ಹವಾನಿಯಂತ್ರಣ ಸೌಲಭ್ಯ ಒದಗಿಸುವ ಕಾಮಗಾರಿಗೆ 2013–14ನೇ ಸಾಲಿನ ಆಯವ್ಯಯದ ಅಪೆಂಡಿಕ್ಸ್ 'ಇ' ರಲ್ಲಿರುವ ಲೆಕ್ಕ ಶೀರ್ಷಿಕೆ 4059 (ಯೋಜನೆ) ನ್ಯಾಯಾಲಯದ ಕಟ್ಟಡಗಳಡಿ ರೂ. 27200.00 ಲಕ್ಷಗಳ ಅನುದಾನವು ಒದಗಿಸಲಾಗಿದ್ದು, ಒದಗಿಸಿದ ಅನುದಾನದ ಮಿತಿಯೊಳಗೆ ಸದರಿ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳುವ ಷರತ್ತಿಗೊಳಪಟ್ಟು ಅಂದಾಜು ಮೊತ್ತ ರೂ. 800.00 ಲಕ್ಷ (ರೂಪಾಯಿ ಎಂಟು ನೂರು ಲಕ್ಷಗಳು ಮಾತ್ರ) ಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**PR. 1200**

**ಕೆ.ಎಂ. ವೀರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು
ಒಳನಾಡು ಜಲಸಾರಿಗೆ ಇಲಾಖೆ (ಕಟ್ಟಡಗಳು).

## ಶಿಕ್ಷಣ ಸಚಿವಾಲಯ

**ವಿಷಯ :** ಶ್ರೀ ಎಸ್.ಆರ್. ಮಠಪತಿ, ಕ್ಷೇತ್ರ ಶಿಕ್ಷಣಾಧಿಕಾರಿ, ಬಸವನಬಾಗೇವಾಡಿ ಇವರ ಮೇಲಿನ ಆರೋಪಗಳ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1. ಅಪರ ಆಯುಕ್ತರು ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ, ಇವರ ಪತ್ರ ಸಂಖ್ಯೆ: ಸಿ5:ಕ್ಷೇಶಿಬಬಾ:ಎಸ್‌ಆರ್‌ಎಂ: 38: 2009–10, ದಿನಾಂಕ : 17–02–2010.
2. ಸರ್ಕಾರದ ಕಾರಣ ಕೇಳುವ ನೋಟೀಸು ಸಂಖ್ಯೆ : ಇಡಿ 225 ಡಿಜಿಓ 2009 (ಭಾಗ) ದಿನಾಂಕ : 08–07–2010.
3. ಶ್ರೀ ಎಸ್.ಆರ್. ಮಠಪತಿ ಇವರ ಪ್ರತಿ ರಕ್ಷಣಾ ಹೇಳಿಕೆ ದಿನಾಂಕ : 30–11–2010.
4. ಅಪರ ಆಯುಕ್ತರು ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ, ಇವರ ಪತ್ರ ಸಂಖ್ಯೆ: ಸಿ5:ಕ್ಷೇಶಿಬಬಾ :ಎಸ್‌ಆರ್‌ಎಂ:38 : 2009–10, ದಿನಾಂಕ : 11–02–2011.
5. ಸರ್ಕಾರದ ಆದೇಶ ಸಂಖ್ಯೆ : ಇಡಿ 225 ಡಿಜಿಓ 2009 (ಭಾಗ) ದಿನಾಂಕ : 26–03–2011.
6. ಶ್ರೀ ಡಿ.ವಿ. ಶೇಟ್, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಧಾರವಾಡ ಇವರ ವಿಚಾರಣಾ ವರದಿ ದಿನಾಂಕ: 02–03–2012.
7. ಎರಡನೇ ಕಾರಣ ಕೇಳುವ ನೋಟಿಸು ಸಂಖ್ಯೆ : ಇಡಿ 225 ಡಿಜಿಓ 2009 (ಭಾಗ) ದಿನಾಂಕ : 26–05–2012.
8. ಶ್ರೀ ಎಸ್.ಆರ್. ಮಠಪತಿ, ನಿವೃತ್ತ ಕ್ಷೇತ್ರ ಶಿಕ್ಷಣಾಧಿಕಾರಿಗಳು, ಬಸವನ ಬಾಗೇವಾಡಿ, ಬಿಜಾಪುರ ಜಿಲ್ಲೆ ಇವರ ಪ್ರತಿ ರಕ್ಷಣಾ ಹೇಳಿಕೆ ದಿನಾಂಕ : 14–06–2013.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಾಂಕ (1)ರಲ್ಲಿ ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ ಇವರು ಶ್ರೀ ಎಸ್.ಆರ್. ಮಠಪತಿ, ಕ್ಷೇತ್ರ ಶಿಕ್ಷಣಾಧಿಕಾರಿ, ಬಸವನ ಬಾಗೇವಾಡಿ, ಬಿಜಾಪುರ ಜಿಲ್ಲೆ ಇವರ ಮೇಲೆ ಈ ಕೆಳಕಂಡ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ನಡೆಸಿ ಶಿಸ್ತು ಕ್ರಮ ಜರುಗಿಸುವ ಸಲುವಾಗಿ ದೋಷರೋಪಣಾ ಪಟ್ಟಿಯನ್ನು ಸಲ್ಲಿಸಿರುತ್ತಾರೆ.

**ಆರೋಪ : 1**

ಹೆಚ್ಚುವರಿ ಶಿಕ್ಷಕರ ಸ್ಥಳಾಂತರದ ಮಾಹಿತಿ ಪರಿಶೀಲಿಸಲಾಗಿ ನಿಯಮ ಬಾಹಿರವಾಗಿ 30 ಜನ ಶಿಕ್ಷಕರಿಗೆ ವರ್ಗಾವಣೆ ಆದೇಶ ಹೊರಡಿಸಿ ಶಿಕ್ಷಕರ ವರ್ಗಾವಣೆ ನಿಯಂತ್ರಣ ಕಾಯ್ದೆ 2007ನ್ನು ಉಲ್ಲಂಘಿಸಿ ಕರ್ತವ್ಯ ಲೋಪವೆಸಗಿರುವ ಆರೋಪಕ್ಕೆ ಗುರಿಯಾಗಿರುತ್ತೀರಿ.

**ಆರೋಪ : 2**

ಹೂವಿನ ಹಿಪ್ಪರಗಿ ಸಮೂಹ ಸಹಾಯಕ ಶಿಕ್ಷಣಾಧಿಕಾರಿಗಳ ಪ್ರಭಾರವನ್ನು ನೀವೇ ಸ್ವತಃ ನಿರ್ವಹಣೆ ಮಾಡಿ ಸದರ ಸಮೂಹಕ್ಕೆ ಸಂಬಂಧಿಸಿದ ಹೆಚ್ಚುವರಿ ಶಿಕ್ಷಕರ ಸ್ಥಳಾಂತರಕ್ಕೆ ಸಂಬಂಧಿಸಿದಂತೆ ಯಾವುದೇ ದಾಖಲೆ ಪರಿಶೀಲನೆಗೆ ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ವಿಜಾಪುರ ಇವರಿಗೆ ನೀಡದೆ ಕರ್ತವ್ಯ ಲೋಪವೆಸಗಿರುವಿರಿ.

**ಆರೋಪ : 3**

2009–10ನೇ ಸಾಲಿನಲ್ಲಿ ಶ್ರೀಮತಿ ಡಿ.ಜಿ. ಕೋಟಿ, ಸ.ಶಿ.ಎಚ್.ಪಿ.ಎಸ್. ರೋಣಿಹಾಳ ತಾಲ್ಲೂಕು ಬಸವನ ಬಾಗೇವಾಡಿ ಇವರು ಜಿಲ್ಲಾ ಮಟ್ಟದ ಕೌನ್ಸಿಲಿಂಗ್‌ದಲ್ಲಿ ಎಂ.ಪಿ.ಎಸ್. ಕೋಲಾರ ಶಾಲೆಯನ್ನು ಆಯ್ಕೆ ಮಾಡಿಕೊಂಡಿದ್ದು ಸದರ ವರ್ಗಾವಣೆ ಆದೇಶವನ್ನು ಮೇಲಾಧಿಕಾರಿಗಳ ಗಮನಕ್ಕೆ ತರದೇ ಈಗಾಗಲೇ ಹೆಚ್ಚುವರಿ ಶಿಕ್ಷಕರಿರುವರೆಂದು ಗುರುತಿಸಿದ ಕೆ.ಬಿ.ಎಚ್.ಪಿ.ಎಸ್. ಮುಳವಾಡ ಶಾಲೆಗೆ ತಮ್ಮ ಹಂತದಲ್ಲಿಯೇ ವರ್ಗಾವಣೆ ಆದೇಶ ಮಾರ್ಪಾಡು ಮಾಡಿ ಶಿಕ್ಷಕರ ವರ್ಗಾವಣೆ ನಿಯಂತ್ರಣ ಕಾಯ್ದೆ 2007 ಉಲ್ಲಂಘಿಸಿರುವ ಆರೋಪಕ್ಕೆ ಗುರಿಯಾಗಿರುತ್ತೀರಿ.

**ಆರೋಪ : 4**

ಶ್ರೀ ಎಂ.ಕೆ. ಚೌಧರಿ, ದೈಹಿಕ ಶಿಕ್ಷಕರು ಮಾಧರಿ ಪ್ರಾಥಮಿಕ ಶಾಲೆ ಮುಳವಾಡ ಇವರನ್ನು ಸದರಿ ಶಾಲೆಯಲ್ಲಿ ಹೆಚ್ಚುವರಿ ಶಿಕ್ಷಕರೆಂದು ಗುರುತಿಸಿ ಹುದ್ದೆ ಸಮೇತ ಯು.ಬಿ.ಎಸ್. ಕೋಲಾರಕ್ಕೆ ಸ್ಥಳಾಂತರ ಮಾಡಿರುತ್ತೀರಿ. ಹೆಚ್ಚುವರಿ ಹುದ್ದೆಗಳ ಸ್ಥಳಾಂತರಕ್ಕೆ ಸಂಬಂಧಿಸಿದಂತೆ ದೈಹಿಕ ಶಿಕ್ಷಕರನ್ನು ಹೆಚ್ಚುವರಿ ಎಂದು ಗುರುತಿಸಲಿಕ್ಕೆ ಅವಕಾಶವಿರುವುದಿಲ್ಲ. ಇದರಿಂದ ಮಾರ್ಗಸೂಚಿಗಳನ್ನು ಉಲ್ಲಂಘಿಸಿರುವ ಆರೋಪಕ್ಕೆ ಗುರಿಯಾಗಿರುತ್ತೀರಿ.

**ಆರೋಪ : 5**

ಶ್ರೀಮತಿ ಶೋಭಾ. ಮ. ಬಾಟಿ. ಸ.ಶಿ. ಸ.ಪ್ರಾ. ಶಾಲೆ ಇಂಗಳೇಶ್ವರ ಎಲ್‌ಟಿ 02 ಇವರನ್ನು ಆ ಶಾಲೆಯಲ್ಲಿ ಹೆಚ್ಚುವರಿ ಎಂದು ಗುರುತಿಸಿ ಕೆ.ಜಿ.ಎಸ್. ಕೋಲಾರಕ್ಕೆ ಹುದ್ದೆ ಸಮೇತ ಸ್ಥಳಾಂತರ ಮಾಡಿ ತದ ನಂತರ ಶ್ರೀ ಎಸ್.ಎಚ್. ಉಕ್ಕಲಿ, ಸ.ಶಿ. ಎಚ್.ಪಿ.ಎಸ್. ಬೂದಿಹಾಳ, ಇವರನ್ನು ಆ ಶಾಲೆಯಲ್ಲಿ ಹೆಚ್ಚುವರಿ ಎಂದು ಗುರುತಿಸಿ ಶ್ರೀಮತಿ ಶೋಭಾ ಬಾಟಿ, ಸ.ಶಿ. ಇವರು ಕಾರ್ಯ ನಿರ್ವಹಿಸುತ್ತಿದ್ದ ಕಿರಿಯ ಪ್ರಾಥಮಿಕ ಶಾಲೆ ಇಂಗಳೇಶ್ವರ ಎಲ್‌ಟಿ–2ಕ್ಕೆ ಹುದ್ದೆ ಸಮೇತ ಸ್ಥಳಾಂತರ ಮಾಡಿರುವಿರಿ ಎಂದು ಅಡ್ಡ ಸ್ಥಳಾಂತರವಾಗಿದ್ದು ನಿಯಮ (cross shifting) ಉಲ್ಲಂಘಿಸಿರುವಿರಿ.

**ಆರೋಪ : 6**

ವಲಯದಲ್ಲಿ 12 ಜನ ಶಿಕ್ಷಕರನ್ನು ನಿಯಮಬಾಹಿರವಾಗಿ ನಿಯೋಜನೆ ಮಾಡಿ ಕರ್ತವ್ಯ ಲೋಪವೆಸಗಿರುವಿರಿ.

**ಆರೋಪ : 7**

ಅಕ್ಷರ ದಾಸೋಹ ಕಾರ್ಯಕ್ರಮದಡಿಯಲ್ಲಿ ಬಿಸಿ ಊಟ ತಯಾರಿಕೆಯಲ್ಲಿ ಸಂಭವಿಸಬಹುದಾದ ಬೆಂಕಿ ಅನಾಹುತ ತಪ್ಪಿಸಲು ಮುನ್ನೆಚ್ಚರಿಕೆ ಕ್ರಮವಾಗಿ ಅಗ್ನಿಶಾಮಕ ಉಪಕರಣ ಅಳವಡಿಸಲು ಸರ್ಕಾರದ ಅ.ಸ.ಪ. ಸಂಖ್ಯೆ : ಇಡಿ 140 ಎಂಸಿಡಿ 2009, ದಿನಾಂಕ : 17–04–2009ರಂದು ಸೂಚಿಸಿದಂತೆ ನೀವು ನಿಮ್ಮ ಕಛೇರಿ ಜ್ಞಾಪನ ಸಂಖ್ಯೆ : ಇ1 : ಬೆಂ ಅಎಫ್ ಅಂಡ್ ಪಿ–1 : 2009–10 ದಿನಾಂಕ : 20–07–2009ರ ಪ್ರಕಾರ ವಲಯದ ಎಲ್ಲ ಸಿ.ಎ.ಇ.ಓ. ಮತ್ತು ಮುಖ್ಯ ಗುರುಗಳನ್ನು ಉಲ್ಲೇಖಿಸಿ ಶ್ರೀ ಶಿವಾ ಎಂಟರ್‌ಪ್ರೈಸಸ್ ಇಮಡಿ ಇವರಲ್ಲಿ ಬೆಂಕಿ ಅನಾಹುತ ತಡೆಯುವ ಟ್ಯಾಂಕ್ ಖರೀದಿಸಲು ಆದೇಶಿಸಿರುವಿರಿ. ಇದರಿಂದ ಇಲಾಖೆಯ ನಿಯಮ ಮತ್ತು ಖರೀದಿ ನಿಯಮಗಳನ್ನು ಉಲ್ಲಂಘಿಸಿ ಕರ್ತವ್ಯ ಲೋಪವೆಸಗಿರುವ ಆರೋಪಕ್ಕೆ ಗುರಿಯಾಗಿರುತ್ತೀರಿ.

ಮೇಲೆ ಓದಲಾದ ಕ್ರಮಾಂಕ (2)ರಲ್ಲಿ ಶ್ರೀ ಎಸ್.ಆರ್. ಮಠಪತಿ, ಕ್ಷೇತ್ರ ಶಿಕ್ಷಣಾಧಿಕಾರಿ, ಬಸವನ ಬಾಗೇವಾಡಿ, ಬಿಜಾಪುರ ಜಿಲ್ಲೆ ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ 1957 ನಿಯಮ 11ರನ್ವಯ ಕಾರಣ ಕೇಳುವ ನೋಟೀಸನ್ನು ಜಾರಿಗೊಳಿಸಲಾಯಿತು.

ಮೇಲೆ ಓದಲಾದ ಕ್ರಮಾಂಕ (3)ರಲ್ಲಿ ಸದರಿ ಅಧಿಕಾರಿಯು ನೀಡಿರುವ ಪ್ರತಿ ರಕ್ಷಣಾ ಹೇಳಿಕೆಯಲ್ಲಿ ತಮ್ಮ ಮೇಲಿನ ಆರೋಪಗಳನ್ನು ನಿರಾಕರಿಸಿರುತ್ತಾರೆ. ಶ್ರೀ ಎಸ್.ಆರ್. ಮಠಪತಿರವರ ರಕ್ಷಣಾ ಹೇಳಿಕೆಯನ್ನು ಮೇಲೆ ಓದಲಾದ ಕ್ರಮಾಂಕ (4)ರಲ್ಲಿ ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ ಇವರ ಅಭಿಪ್ರಾಯವನ್ನು ಕೋರಲಾಗಿತ್ತು. ಶ್ರೀ ಎಸ್.ಆರ್. ಮಠಪತಿ ಇವರು ಸಲ್ಲಿಸಿದ್ದ ರಕ್ಷಣಾ ಹೇಳಿಕೆಯನ್ನು ಒಪ್ಪದೇ ಶಿಸ್ತು ಕ್ರಮ ಜರುಗಿಸಬಹುದಾಗಿದೆ ಎಂದು ಅಭಿಪ್ರಾಯಿಸಿದ್ದರ ಹಿನ್ನೆಲೆಯಲ್ಲಿ ಪ್ರಕರಣದ ಸತ್ಯಾಸತ್ಯತೆಯನ್ನು ತಿಳಿಯುವ ಸಂಬಂಧ ಸರ್ಕಾರವು ಮೇಲೆ ಓದಲಾದ ಕ್ರಮಾಂಕ (5)ರ ದಿನಾಂಕ : 26–03–2011ರ ಆದೇಶದಲ್ಲಿ ವಿಚಾರಣಾಧಿಕಾರಿಗಳು ಹಾಗೂ ಮಂಡನಾಧಿಕಾರಿಗಳನ್ನು ನೇಮಿಸಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮಾಂಕ(6)ರಲ್ಲಿ ಶ್ರೀ ಡಿ.ವ್ಹಿ. ಶೇಟ್, ನಿವೃತ್ತ ನ್ಯಾಯಾಧೀಶರು, ಧಾರವಾಡ ಇವರು ಸದರಿ ಆರೋಪಗಳ ಬಗ್ಗೆ ವಿಚಾರಣೆ ನಡೆಸಿ, ವಿಚಾರಣಾ ವರದಿಯಲ್ಲಿ ಒಟ್ಟು 7 ಆರೋಪಗಳಲ್ಲಿ 1 ಆರೋಪ ಬಿಟ್ಟು ಉಳಿದ 6 ಆರೋಪಗಳು ಸಾಬೀತಾಗಿವೆ ಎಂದು ವರದಿಯನ್ನು ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮಾಂಕ (7)ರಲ್ಲಿ ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯನ್ನು ಲಗತ್ತಿಸಿ ಶ್ರೀ ಎಸ್.ಆರ್. ಮಠಪತಿ, ಹಿಂದಿನ ಕ್ಷೇತ್ರ ಶಿಕ್ಷಣಾಧಿಕಾರಿ, ಬಸವನ ಬಾಗೇವಾಡಿ, ಬಿಜಾಪುರ ಇವರಿಗೆ ಸದರಿ ವಿಚಾರಣಾ ವರದಿಯಲ್ಲಿನ ಅಂಶಗಳ ಬಗ್ಗೆ ಲಿಖಿತ ಹೇಳಿಕೆಯನ್ನು ನೀಡುವಂತೆ ಕೋರಿ ಎರಡನೇ ಕಾರಣ ಕೇಳುವ ನೋಟೀಸ್‌ನ್ನು ನೀಡಲಾಗಿತ್ತು.

ಸದರಿ ಆರೋಪಗಳ ಬಗ್ಗೆ ಆಪಾದಿತರು ಮೇಲೆ ಓದಲಾದ ಕ್ರಮಾಂಕ (8)ರ ದಿನಾಂಕ : 14–06–2013ರಂತೆ ಲಿಖಿತ ಪ್ರತಿ ರಕ್ಷಣಾ ಹೇಳಿಕೆಯನ್ನು ಪೂರಕ ದಾಖಲೆಗಳೊಂದಿಗೆ ನೀಡಿ ಅವರ ಮೇಲಿನ ಆರೋಪವನ್ನು ನಿರಾಕರಿಸಿ ತಮ್ಮ ಮೇಲಿನ ಆಪಾದನೆಗಳ ಸಂಬಂಧ ಸರ್ಕಾರಕ್ಕೆ ಯಾವುದೇ ಆರ್ಥಿಕ ನಷ್ಟ ಉಂಟಾಗಿರುವುದಿಲ್ಲವೆಂದು ತಿಳಿಸುತ್ತಾ, ತಮ್ಮ ಮೇಲಿನ ಆರೋಪಗಳಿಂದ ದೋಷಮುಕ್ತಗೊಳಿಸುವಂತೆ ಕೋರಿರುತ್ತಾರೆ.

ವಿಚಾರಣಾಧಿಕಾರಿಯವರು ನೀಡಿರುವ ವಿಚಾರಣಾ ವರದಿಯಲ್ಲಿ ಸಾಬೀತಾದ 6 ಆರೋಪಗಳ ಸ್ವರೂಪವನ್ನು ಪರಿಶೀಲಿಸಿದಾಗ ಇವುಗಳ ಶಿಕ್ಷಕರ ನಿಯೋಜನೆ/ಸ್ಥಳ ನಿಯುಕ್ತಿಗೆ ಸಂಬಂಧಿಸಿದೆ. ಇವುಗಳಲ್ಲಿ ಯಾವುದೇ ಹಣಕಾಸಿನ ಅವ್ಯವಹಾರಗಳು/ದುರ್ನಡತೆ ಆಗಲಿ ಇರುವುದಿಲ್ಲವೆಂಬುದನ್ನು ಗಮನಿಸಬಹುದು. ಉಳಿದ 7ನೇ ಆರೋಪವು ಅಗ್ನಿಶಾಮಕ ಉಪಕರಣಗಳ ಖರೀದಿಗೆ ಸಂಬಂಧಿಸಿದ್ದು, ಈ ಆರೋಪವು ವಿಚಾರಣಾ ವರದಿಯಲ್ಲಿ ಸಾಬೀತಾಗಿರುವುದಿಲ್ಲ. ಪ್ರಕರಣವನ್ನು ಪರಿಶೀಲಿಸಲಾಗಿ ಸಾಬೀತಾದ 6 ಆರೋಪಗಳಲ್ಲಿ ನಿಗದಿಪಡಿಸಿದ ಕಾರ್ಯನೀತಿಯಂತೆ ಕಾರ್ಯ ನಿರ್ವಹಿಸಿಲ್ಲದಿರುವ ಆರೋಪಗಳು ಇರುತ್ತವೆ. ಇದರಲ್ಲಿ ಹಣಕಾಸಿನ ದುರ್ವ್ಯವಹಾರ/ ದುರ್ನಡತೆ/ಸರ್ಕಾರದ ಬೊಕ್ಕಸಕ್ಕೆ ನಷ್ಟ ಉಂಟಾಗಿರುವುದಿಲ್ಲ. ಕೇವಲ ಕಾರ್ಯ ವಿಧಾನ ಅನುಸರಿಸುವಲ್ಲಿ ಲೋಪ ದೋಷ ಉಂಟಾಗಿರುತ್ತದೆ. ಹಾಗೂ ಸದರಿ ಅಧಿಕಾರಿಯು ನೀಡಿರುವ ವಿವರಣೆ/ ರಕ್ಷಣಾ ಹೇಳಿಕೆ ಹಾಗೂ ಅವರು ಸಲ್ಲಿಸಿರುವ ಪೂರಕ ದಾಖಲೆಗಳನ್ನು ಸರ್ಕಾರವು ಪರಿಶೀಲಿಸಿ ಶ್ರೀ ಎಸ್.ಆರ್. ಮಠಪತಿ ರವರು 2ನೇ ಕಾರಣ ಕೇಳುವ ನೋಟೀಸಿಗೆ ನೀಡಿರುವ ರಕ್ಷಣಾ ಹೇಳಿಕೆಯನ್ನು

ಒಪ್ಪಿಕೊಂಡು ಈ ರೀತಿಯ ಘಟನೆಗಳು ಇನ್ನು ಮುಂದೆ ಮರುಕಳಿಸದಂತೆ ಎಚ್ಚರಿಕೆ ವಹಿಸುವಂತೆ ಸೂಚನೆ ನೀಡಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಇಡಿ 225 ಡಿಜಿಓ 2009 (ಭಾಗ), ಬೆಂಗಳೂರು, ದಿನಾಂಕ : 28ನೇ ಅಕ್ಟೋಬರ್ 2013**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀ ಎಸ್.ಆರ್. ಮಠಪತಿ, ನಿವೃತ್ತ ಕ್ಷೇತ್ರ ಶಿಕ್ಷಣಾಧಿಕಾರಿ, ಬಸವನ ಬಾಗೇವಾಡಿ, ಬಿಜಾಪುರ ಜಿಲ್ಲೆ ಇವರ ವಿರುದ್ಧದ ಆರೋಪಗಳ ಮೇಲೆ ಸದರಿ ಅಧಿಕಾರಿಯು ನೀಡಿರುವ ಪ್ರತಿ ರಕ್ಷಣಾ ಹೇಳಿಕೆಯನ್ನು ಒಪ್ಪಿಕೊಂಡು ಅವರ ಮೇಲಿನ ಎಲ್ಲಾ ಆರೋಪಗಳಿಂದ ದೋಷಮುಕ್ತಗೊಳಿಸಿ ಇನ್ನು ಮುಂದೆ ಇಂತಹ ಘಟನೆಗಳು ಮರುಕಳಿಸದಂತೆ ಎಚ್ಚರಿಕೆ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**PR. 1201**

**SC-25**

**ಜಿ.ಆರ್. ಅನ್ನಪೂರ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಆಡಳಿತ ಮತ್ತು ಸಮಿತಿಗಳು).

## REVENUE SECRETARIAT

**SUB :** Grant of 14.00 acres of land in Survey Number 35 of Guddenahalli Village, Hallimysore Hobli, Holenarasipura Taluk, Hassan District for construction of New Auction Platform by Tobacco Board, Government of India, Ministry of Commerce and Industry.

**READ :**
1. Letter No. 2012-13/385 dated : 19-06-2012 the Auction Superintendent, Tobacco Board, Ramanathpura Arakalagudu Taluk.
2. Letter No. LND(1)404/2012-13 dated 21-02-2013 the Deputy Commissioner, Hassan District.

**PREAMBLE :**

Vide letter dated : 19-06-2012 read at above (1), the Auction Superintendent, Ramanathapura, Arakalagudu Taluk has requested Tahasildar Holenarasipur Taluk to grant 14.00 acres of land in Survey Number 35 at Guddenahalli Village, Hallimysore Hobli, Holenarsipura Taluk for the construction of a New Auction Platform to meet the requirement of large number of tobacco growers.

In the letter read in Sl. No. 2 of the above, the Deputy Commissioner, Hassan has reported availability of Gomal Land to the extent of 16.36 acres in Survey Number 35 at Guddenahalli, Holenarasipura Taluk. Out of this 2.00 acres has been earmarked for burial ground, 36 guntas has been reserved for construction of approach road to the burial ground. In the remaining 14.00 acres unauthorized cultivators have agreed to give up the land for the purpose of establishing an auction platform by the Tobacco Board. The market value of the land at Guddenahalli is Rs. 2,500/- per gunta (Rs. 1,00,000/- per acre) and the Regional Manager, Periyapatana Tabacco Board has agreed to pay the same amount. Hence the order.

**GOVERNMENT ORDER NO. RD 23 LGH 2013, BANGALORE, DATED : 26-09-2013.**

In the circumstance explained above to grant 14.00 acres of land in Survey Number 35 of Guddenahalli Village, Hallimysore Hobli, Holenarasipura Taluk, Hassan District to Tobacco Board, Government of India, Ministry of Commerce and Industry for construction of a new auction platform at the market value of Rs. 1.00 lakh per acre subject to the following terms and conditions :-

1. The grantee shall utilize the granted land within the two years for the purpose for which it is allotted.
2. The grantee shall ensure that the granted land would not be utilized for the purpose which would result in permanent damage to the land.
3. The grantee shall ensure the there is no encroachment in the granted land.
4. The land grant is subject to finalization of any Court order pending in any of the Courts.
5. The land shall not be subleased, mortgaged, sold, gifted alienated in any form.
6. If the grantee finds that the said land is not useful, the grantee shall return the granted land to the Government.
7. The granted land is subject to terms and conditions as prescribed in the Karnataka Land Grant Rules, 1959 and hence any violation of the condition would amount to cancellation of grant and the Government reserves the right to resume the said land without any compensation.
8. The Deputy Commissioner shall impose necessary additional conditions, keeping the ground reality during transfer of land to the grantee.

By Order and in the name of the Governor of Karnataka,

**P.R. 1202**

**SC-100**

**UMADEVI**

Under Secretary to Government,
Revenue Department (Land Grant-I).

## WATER RESOURCES SECRETARIAT

**ADDENDUM ORDER**

**NO. WRD 73 CAM 2013, Bangalore, Dated : 29-10-2013.**

The following words and number are added after Sl. No. 11 in the first para of the order portion in the Government Order No. WRD 39 CAM 2005, dated : 08-06-2005.

**12. Director, CADA Directorate - Member**

By Order and in the name of the Governor of Karnataka,

**L. BYRAPPA**

Under Secretary to Government,

Water Resources Department (CADA).

**P.R. 1204**

**SC-100**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಜೀತೇಂದ್ರ ಸಿಂಗ್, ಕೆ.ಎ.ಎಸ್., ವಿಶೇಷ ಕರ್ತವ್ಯಾಧಿಕಾರಿ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ, ಇವರ ಹುದ್ದೆಯನ್ನು ಮರುಪದನಾಮೀಕರಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ, ಪತ್ರ ಸಂಖ್ಯೆ : ಐಟಿಡಿ 198 ಪ್ರಕಾ 2013, ದಿನಾಂಕ : 01-04-2013.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ಜೀತೇಂದ್ರ ಸಿಂಗ್, ಕೆ.ಎ.ಎಸ್, (ಸೂಪರ್ ಟೈಂ ಸ್ಕೇಲ್), ವಿಶೇಷ ಕರ್ತವ್ಯಾಧಿಕಾರಿ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ, ಇವರಿಗೆ ಅಧಿಸೂಚನೆ ಸಂಖ್ಯೆ : ಸಿಆಸುಇ 25 ಆಸೇವ 2013, ದಿನಾಂಕ : 30-03-2013ರಲ್ಲಿ ಕೆ.ಎ.ಎಸ್. ಆಯ್ಕೆ ಶ್ರೇಣಿಯಿಂದ ಸೂಪರ್ ಟೈಂ ಸ್ಕೇಲ್ ವೃಂದಕ್ಕೆ (ವೇತನ ಶ್ರೇಣಿ ರೂ. 52500-73000) ಪದೋನ್ನತಿ ನೀಡಲಾಗಿದ್ದು, ಇಲಾಖೆಯ ಆಡಳಿತ ಸರಳೀಕರಣಕ್ಕಾಗಿ ಮತ್ತು ಸೂಕ್ತ ಶ್ರೇಣಿ ವ್ಯವಸ್ಥೆಯನ್ನು ಕಾಯ್ದುಕೊಳ್ಳಲು ಸದರಿ ಅಧಿಕಾರಿಯವರು ಕರ್ತವ್ಯ ನಿರ್ವಹಿಸುತ್ತಿರುವ ವಿಶೇಷ ಕರ್ತವ್ಯಾಧಿಕಾರಿ ಹುದ್ದೆಯನ್ನು **ವಿಶೇಷ ಕರ್ತವ್ಯಾಧಿಕಾರಿ ಮತ್ತು ಪದನಿಮಿತ್ತ ಸರ್ಕಾರದ ಅಪರ ಕಾರ್ಯದರ್ಶಿ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ** ಎಂದು ಮರುಪದನಾಮೀಕರಿಸುವಂತೆ ಕೋರಲಾಗಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 353 ಸಅಸೇ 2013, ಬೆಂಗಳೂರು, ದಿನಾಂಕ : 3ನೇ ಸೆಪ್ಟೆಂಬರ್, 2013**

ಶ್ರೀ ಜೀತೇಂದ್ರ ಸಿಂಗ್, ಕೆ.ಎ.ಎಸ್., ವಿಶೇಷ ಕರ್ತವ್ಯಾಧಿಕಾರಿ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ, ಇವರಿಗೆ ಕೆ.ಎ.ಎಸ್. (ಆಯ್ಕೆ ಶ್ರೇಣಿ) ಯಿಂದ ಕೆ.ಎ.ಎಸ್. (ಸೂಪರ್ ಟೈಂ ಸ್ಕೇಲ್) ವೃಂದಕ್ಕೆ ಸ್ಥಾನಪನ್ನ ಬಡ್ತಿ ನೀಡಿರುವ ಹಿನ್ನೆಲೆಯಲ್ಲಿ ಇವರು ಕಾರ್ಯ ನಿರ್ವಹಿಸುತ್ತಿರುವ ವಿಶೇಷ ಕರ್ತವ್ಯಾಧಿಕಾರಿ ಹುದ್ದೆಯನ್ನು **ವಿಶೇಷ ಕರ್ತವ್ಯಾಧಿಕಾರಿ ಮತ್ತು ಪದನಿಮಿತ್ತ ಸರ್ಕಾರದ ಅಪರ ಕಾರ್ಯದರ್ಶಿ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ** ಎಂದು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅಥವಾ ಸದರಿ ಅಧಿಕಾರಿಯವರ ಪದಾವಧಿಯವರೆಗೆ, ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮರುಪದನಾಮೀಕರಿಸಿ ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 474 ಸೇ-3/13: ದಿನಾಂಕ : 26-07-2013ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಚಂದ್ರಶೇಖರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-6).

**PR. 1205**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಕೆ.ಎಂ. ವೀರಯ್ಯ, ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ಇವರ ವಿರುದ್ಧ ಇಲಾಖಾ ವಿಚಾರಣೆಯ-ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ : ಆರ್‌ಡಿ 24 ಎಡಿಇ 2002, ದಿನಾಂಕ : 27-06-2011.

2. ನೋಟೀಸ್ ಸಂಖ್ಯೆ : ಸಿಆಸುಇ 11 ಸೇಇವಿ 2011, ದಿನಾಂಕ : 04-01-2012.

3. ಶ್ರೀ ಕೆ.ಎಂ. ವೀರಯ್ಯ ಸರ್ಕಾರದ ಅಧೀನ ಕಾರ್ಯದರ್ಶಿರವರ ಮನವಿ ದಿನಾಂಕ : 23–01–2012.
4. ಅನಧಿಕೃತ ಟಿಪ್ಪಣಿ ಸಂಖ್ಯೆ : ಸಿಆಸುಇ 11 ಸೇಇವಿ 2011, ದಿನಾಂಕ : 27–02–2012.
5. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 11 ಸೇಇವಿ 2011, ದಿನಾಂಕ : 15–02–2013.
6. ವಿಚಾರಣಾಧಿಕಾರಿಯವರ ಪತ್ರ ದಿನಾಂಕ : 04–09–2013.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ, ಅನಧಿಕೃತ ಟಿಪ್ಪಣಿಯಲ್ಲಿ ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3) ಇವರು ಶ್ರೀ ಕೆ.ಎಂ. ವೀರಯ್ಯ, ಸರ್ಕಾರದ ಅಧೀನ ಕಾರ್ಯದರ್ಶಿ, ಇವರು ಶಾಖಾಧಿಕಾರಿಯಾಗಿ 2003 ರಿಂದ ಮೇ 2008ರ ಅವಧಿಯಲ್ಲಿ, ಕಂದಾಯ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿದ್ದಾಗ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಹೊಸಕೋಟೆ ತಾಲ್ಲೂಕು, ಅನುಗೊಂಡನ ಹಳ್ಳಿ ಹೋಬಳಿ, ತಿರುಮಲ ಶೆಟ್ಟಿ ಗ್ರಾಮದ ಸ.ನಂ. 46 ಮತ್ತು 47ರ ತೋಟಿ ಇನಾಂತಿ ಜಮೀನು ಮರು ಮಂಜೂರಾತಿಗೆ ಸಂಬಂಧಿಸಿದಂತೆ, ಶ್ರೀ ಬಿ.ಹೆಚ್. ಶಿವಪ್ಪ ತಹಶೀಲ್ದಾರ್ ಮುಂಡರಗಿ ತಾಲ್ಲೂಕು, ಹಾಗೂ ಇತರರ ವಿರುದ್ಧ ಜಂಟಿ ಇಲಾಖಾ ವಿಚಾರಣಾ ವರದಿಯನ್ನು ವಿಚಾರಣಾಧಿಕಾರಿಯವರು ದಿನಾಂಕ : 02–11–2006ರಂದು ಸರ್ಕಾರಕ್ಕೆ ಸಲ್ಲಿಸಿದ್ದು. ವಿಷಯ ನಿರ್ವಾಹಕರು 21–11–2007 ರಂದು ಶಾಖಾಧಿಕಾರಿಯವರಿಗೆ ಮಂಡಿಸಿದ್ದು. ನಂತರ ಶಾಖಾಧಿಕಾರಿಯಾಗಿದ್ದ ಆರೋಪಿತ ಅಧಿಕಾರಿಯವರು ದಿನಾಂಕ : 31–01–2008ರಂದು ಅಧೀನ ಕಾರ್ಯದರ್ಶಿಯವರಿಗೆ ಸಲ್ಲಿಸಿರುತ್ತಾರೆ. **'ಅದೇ ದಿವಸ ಹೊರಡಿಸಿ'** ಎಂದು ಅಧೀನ ಕಾರ್ಯದರ್ಶಿಯವರು ಸೂಚಿಸಿದ್ದರೂ ಸಹ ಹೊರಡಿಸದೇ ಇರುವುದರ ಜೊತೆಗೆ ವಿಚಾರಣಾ ವರದಿಯನ್ನು 2 ವರ್ಷ 6 ತಿಂಗಳುಗಳ ವಿಳಂಬ ಮಾಡುವ ಮೂಲಕ ಕರ್ತವ್ಯಚ್ಯುತಿ ಎಸಗಿದ್ದಾರೆಂದು ತಿಳಿಸಿರುವುದರೊಂದಿಗೆ ಆರೋಪಿತ ಅಧಿಕಾರಿಯವರಾದ, ಶ್ರೀ ಕೆ.ಎಂ. ವೀರಯ್ಯ, ಇವರ ವಿರುದ್ಧ ದೋಷಾರೋಪಣಾ ಪಟ್ಟಿಯನ್ನು ಅನುಬಂಧ 1 ರಿಂದ 4 ರಲ್ಲಿ ತಯಾರಿಸಿ ಕಳುಹಿಸಿದ್ದು, ಸದರಿಯವರ ವಿರುದ್ಧ ಇಲಾಖಾ ವಿಚಾರಣೆಯನ್ನು ಜರುಗಿಸಬೇಕೆಂದು ಕೋರಿದ್ದ ಹಿನ್ನೆಲೆಯಲ್ಲಿ ಮೇಲೆ (2)ರಲ್ಲಿ ಓದಲಾದ ನೋಟೀಸಿನೊಂದಿಗೆ, ಸದರಿ ಅಧಿಕಾರಿಯವರಿಗೆ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳು 1957ರ ನಿಯಮ 11ರಡಿ ಶಿಸ್ತು ಕ್ರಮ ಕೈಗೊಳ್ಳುವ ಉದ್ದೇಶದಿಂದ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಲಾಗಿತ್ತು.

ಮೇಲೆ (3)ರಲ್ಲಿ, ಓದಲಾದ ತಮ್ಮ ಮನವಿಯಲ್ಲಿ, ಸದರಿ ಅಧಿಕಾರಿಯವರು ತಮ್ಮ ವಿರುದ್ಧ ಜಾರಿಗೊಳಿಸಿರುವ ಆರೋಪಗಳಿಗೆ ಸಂಬಂಧಿಸಿದಂತೆ ಉತ್ತರಿಸಲು ಕಾಲಾವಕಾಶವನ್ನು ಮತ್ತು ಅನುಬಂಧ–3ರಲ್ಲಿ ಸೂಚಿಸಿರುವ ದಾಖಲೆಗಳ ಪ್ರತಿಗಳನ್ನು ಒದಗಿಸುವಂತೆ ಕೋರಿದ್ದರು.

ಅದರಂತೆ ಮೇಲೆ 4ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯೊಂದಿಗೆ, ಸದರಿ ಅಧಿಕಾರಿಯವರು ಕೋರಿರುವ ಅನುಬಂಧ–3ರ ದಾಖಾಲೆಗಳ ಪ್ರತಿಗಳನ್ನು ಒದಗಿಸಿ ಪ್ರತಿರಕ್ಷಣಾ ಹೇಳಿಕೆಯನ್ನು ಕೂಡಲೇ ನೀಡುವಂತೆ ತಿಳಿಸಲಾಗಿತ್ತು. ಆದಾಗ್ಯೂ ಸಹ ಇದಕ್ಕೆ ಆರೋಪಿತ ಅಧಿಕಾರಿಯು ಯಾವುದೇ ಪ್ರತಿಕ್ರಿಯೆ ನೀಡದೇ ಇದ್ದುದರಿಂದ ಹಾಗೂ ಆರೋಪಿತ ಅಧಿಕಾರಿಗೆ ಜಾರಿಗೊಳಿಸಿದ ದೋಷಾರೋಪಣಾ ಪಟ್ಟಿಗೆ ಪ್ರತಿ ರಕ್ಷಣಾ ಹೇಳಿಕೆಯನ್ನು ಸಲ್ಲಿಸಲು ಸಾಕಷ್ಟು ಕಾಲಾವಕಾಶ ನೀಡಿದಾಗ್ಯೂ ಆರೋಪಿತ ಅಧಿಕಾರಿಯು ಪ್ರತಿರಕ್ಷಣಾ ಹೇಳಿಕೆ ಸಲ್ಲಿಸದೇ ಇದ್ದುದರಿಂದ ಈ ಪ್ರಕರಣದಲ್ಲಿ ನಿಯಮಾನುಸಾರ ಇಲಾಖಾ ವಿಚಾರಣೆಯನ್ನು ನಡೆಸಲು ತೀರ್ಮಾನಿಸಿದ ಸರ್ಕಾರವು ಮೇಲೆ 05 ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ವಿಚಾರಣಾಧಿಕಾರಿಯವರನ್ನು ನೇಮಿಸಿ ಆದೇಶಿಸಿತ್ತು.

ಅದರಂತೆ ವಿಚಾರಣೆ ನಡೆಸಿದ ವಿಚಾರಣಾಧಿಕಾರಿಯವರು ಮೇಲೆ 06 ರಲ್ಲಿ ಓದಲಾದ ಪತ್ರದೊಂದಿಗೆ ವಿಚಾರಣಾ ವರದಿಯನ್ನು ಲಗತ್ತಿಸಿ ಕಳುಹಿಸಿದ್ದು. ವಿಚಾರಣಾ ವರದಿಯಲ್ಲಿ ಆರೋಪಿತ ಅಧಿಕಾರಿಯಾದ ಶ್ರೀ ಕೆ.ಎಂ. ವೀರಯ್ಯ, ಇವರ ವಿರುದ್ಧ ಹೊರಿಸಲಾಗಿದ್ದ ಆರೋಪಗಳು ರುಜುವಾತಾಗಿರುವುದಿಲ್ಲ ಎಂದು ನಿರ್ಣಯಿಸಿರುತ್ತಾರೆ. ವಿಚಾರಣಾ ವರದಿಯನ್ನು ಅಂಗೀಕರಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 11 ಸೇಇವಿ 2011, ಬೆಂಗಳೂರು, ದಿನಾಂಕ : 21–10–2013**

ಪ್ರಸ್ತಾವನೆಯಲ್ಲಿ ತಿಳಿಸಿರುವ ವಿವರಣೆಗಳ ಹಿನ್ನೆಲೆಯಲ್ಲಿ ಶ್ರೀ ಕೆ.ಎಂ. ವೀರಯ್ಯ, ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ಇವರು ಈ ಹಿಂದೆ ಶಾಖಾಧಿಕಾರಿಯಾಗಿ ಕಂದಾಯ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿದ್ದಾಗ ಎಸಗಿದ್ದಾರೆನ್ನಲಾಗಿದ್ದ ಆರೋಪಗಳು, ಇಲಾಖಾ ವಿಚಾರಣೆಯಲ್ಲಿ ಸಾಬೀತಾಗದೇ ಇರುವುದರಿಂದ ಸದರಿ ಆರೋಪಗಳಿಂದ ಇವರನ್ನು ದೋಷಮುಕ್ತಗೊಳಿಸಿ ಆದೇಶಿಸಿದೆ.

ಈ ಇಲಾಖೆ ವಿಚಾರಣೆ ನಡೆಯದಿದ್ದಲ್ಲಿ, ಅವರು ಪಡೆಯಬಹುದಾಗಿದ್ದ ಎಲ್ಲಾ ಸೌಲಭ್ಯಗಳನ್ನು ಪಡೆಯಲು ಶ್ರೀಯುತರು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಚಂದ್ರಶೇಖರ**

**PR. 1206**

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–6).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ** : ಕರ್ನಾಟಕ ಭವನ, ನವದೆಹಲಿ, ಪ್ರಧಾನ ಕಾರ್ಯದರ್ಶಿ (ಸಮನ್ವಯ) ಹುದ್ದೆಯ ಪೂರಕ ಸಿಬ್ಬಂದಿ ಹುದ್ದೆಯಾದ ಹಿರಿಯ ಸಹಾಯಕ ಹುದ್ದೆಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 647 ಸಅಸೇ 2012, ದಿನಾಂಕ : 26–09–2012.
2. ಸರ್ಕಾರದ ಆದೇಶ ಸಂಖ್ಯೆ : ಡಿಪಿಎಆರ್ 245 ಆಸಸೇ 2012, ದಿನಾಂಕ : 05–10–2012 ಮತ್ತು ದಿನಾಂಕ: 08–10–2012.
3. ಸರ್ಕಾರದ ಅಧಿಸೂಚನೆ ಸಂಖ್ಯೆ : ಡಿಪಿಎಆರ್ 430 ಎಸ್‌ಎಎಸ್ 2013, ದಿನಾಂಕ : 12–07–2013.
4. ನಿವಾಸಿ ಆಯುಕ್ತರು, ಕರ್ನಾಟಕ ಭವನ, ನವದೆಹಲಿ, ಇವರ ಪತ್ರ ಸಂಖ್ಯೆ : ಆರ್‌ಸಿಕೆ/12/ಎಸ್‌ಇಎಸ್/ 2012–13, ದಿನಾಂಕ : 12–07–2013.
5. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 647 ಸಅಸೇ 2012, ದಿನಾಂಕ : 22–08–2013.
6. ನಿವಾಸಿ ಆಯುಕ್ತರು, ಕರ್ನಾಟಕ ಭವನ, ನವದೆಹಲಿ, ಇವರ ಪತ್ರ ಸಂಖ್ಯೆ : ಆರ್‌ಸಿಕೆ/03/ಎಸ್‌ಇಎಮ್/ 2012–13, ದಿನಾಂಕ : 27–07–2013.

**ಪ್ರಸ್ತಾವನೆ :**

ಮೇಲೆ ಕ್ರಮಸಂಖ್ಯೆ (1)ರಲ್ಲಿ ಓದಲಾದ ಆದೇಶದಲ್ಲಿ ಸೃಜಿಸಲಾದ ನವದೆಹಲಿಯ ನಿವಾಸಿ ಆಯುಕ್ತರ ಕಛೇರಿಯಲ್ಲಿನ ಸರ್ಕಾರದ ಪ್ರಧಾನ ಕಾರ್ಯದರ್ಶಿ (ಸಮನ್ವಯ) ಹುದ್ದೆಯನ್ನು ಮತ್ತು ಈ ಕೆಳಕಂಡ ಪೂರಕ ಹುದ್ದೆಗಳನ್ನು ದಿನಾಂಕ : 05–09–2012 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಎರಡು ವರ್ಷಗಳ ಅವಧಿಗೆ ಅಥವಾ ಶ್ರೀ ಕೆ.ಪಿ. ಕೃಷ್ಣನ್, ಭಾ.ಆ.ಸೇ. ಇವರು ಸದರಿ ಹುದ್ದೆಯಲ್ಲಿರುವವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಸೃಜಿಸಿ ಆದೇಶಿಸಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ | ಷರಾ |
|---|---|---|---|
| 1. | ಆಪ್ತ ಕಾರ್ಯದರ್ಶಿ | 01 | ಗ್ರೂಪ್–ಎ ವೃಂದದ ಕಿರಿಯ ಶ್ರೇಣಿ ಅಧಿಕಾರಿ |
| 2. | ಶೀಘ್ರಲಿಪಿಗಾರರು | 02 | |
| 3. | ಕಿರಿಯ ಸಹಾಯಕ | 01 | |
| 4. | ವಾಹನ ಚಾಲಕ | 01 | |
| 5. | ದಲಾಯತ್ (ಗ್ರೂಪ್–ಡಿ) | 02 | |
| | **ಒಟ್ಟು** | **07** | |

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಆದೇಶದನ್ವಯ ಶ್ರೀ ಅಬ್ದುಲ್ ವಾಹಿದ್, ಆಪ್ತ ಕಾರ್ಯದರ್ಶಿ ಮತ್ತು ಶ್ರೀ ಬಿಪಿನ್ ಕುಮಾರ್ ಕರ್ಣ, ಹಿರಿಯ ಸಹಾಯಕ ಅವರುಗಳು ನಿಯೋಜನೆ ಮೇಲೆ ಕರ್ತವ್ಯ ನಿರ್ವಹಿಸಿರುತ್ತಾರೆ. ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ಕೆ.ಪಿ. ಕೃಷ್ಣನ್, ಭಾ.ಆ.ಸೇ., ಇವರು ದಿನಾಂಕ : 12–07–2013 ರಂದು ಕರ್ತವ್ಯದಿಂದ ಬಿಡುಗಡೆ ಹೊಂದಿದ್ದು, ಮೇಲೆ ಓದಲಾದ (4)ರ ಪತ್ರದಲ್ಲಿನ ಕೋರಿಕೆಯ ಮೇರೆಗೆ ಉಲ್ಲೇಖ (1)ರ ಸರ್ಕಾರದ ಆದೇಶವನ್ನು ಮಾರ್ಪಡಿಸಿ ಮೇಲೆ ಕ್ರಮ ಸಂಖ್ಯೆ (5)ರಲ್ಲಿ ಓದಲಾದ ಆದೇಶದಲ್ಲಿ ಕರ್ನಾಟಕ ಭವನ, ನವದೆಹಲಿಯಲ್ಲಿನ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು (ಸಮನ್ವಯ) ಹುದ್ದೆಯ ಪೂರಕ ಹುದ್ದೆಗಳಾದ ಆಪ್ತ ಕಾರ್ಯದರ್ಶಿ ಹಾಗೂ ಹಿರಿಯ ಸಹಾಯಕ ಹುದ್ದೆಗಳನ್ನು ದಿನಾಂಕ : 12–07–2013 ರಿಂದ 31–07–2013 ರವರೆಗೆ ಮುಂದುವರಿಸಿ ಆದೇಶಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (6) ರಲ್ಲಿ ಓದಲಾದ ಪತ್ರದಲ್ಲಿ ನಿವಾಸಿ ಆಯುಕ್ತರು, ಕರ್ನಾಟಕ ಭವನ, ನವದೆಹಲಿರವರು ಬಿಪಿನ್ ಕುಮಾರ್ ಕರ್ಣ, ಹಿರಿಯ ಸಹಾಯಕರು ಇವರ ಸೇವೆಯು ನಿವಾಸಿ ಆಯುಕ್ತರ ಕಛೇರಿಯಲ್ಲಿ ಕೇಂದ್ರ ಸರ್ಕಾರದೊಂದಿಗೆ ಸಮನ್ವಯ ಕಾರ್ಯನಿರ್ವಹಿಸಲು ಉಪಯುಕ್ತವಾಗಲಿದೆಯೆಂದು ತಿಳಿಸುತ್ತಾ ಸದರಿಯವರ ಸೇವಾ ಅವಧಿಯನ್ನು ಕರ್ನಾಟಕ ಭವನದಲ್ಲಿ ಮುಂದಿನ 2 ತಿಂಗಳ ಅವಧಿಗೆ ದಿನಾಂಕ : 01–08–2013 ರಿಂದ 30–09–2013 ರವರೆಗೆ ವಿಸ್ತರಿಸುವ ಬಗ್ಗೆ ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 647 ಸಅಸೇ 2012, ಬೆಂಗಳೂರು, ದಿನಾಂಕ : 2ನೇ ಸೆಪ್ಟೆಂಬರ್, 2013**

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ನವದೆಹಲಿಯ ನಿವಾಸಿ ಆಯುಕ್ತರ ಕಛೇರಿಯಲ್ಲಿನ ಸರ್ಕಾರದ ಪ್ರಧಾನ ಕಾರ್ಯದರ್ಶಿ (ಸಮನ್ವಯ) ಹುದ್ದೆಯ ಪೂರಕ ಸಿಬ್ಬಂದಿ ಹುದ್ದೆಯಾದ ಹಿರಿಯ ಸಹಾಯಕ ಹುದ್ದೆಯನ್ನು ದಿನಾಂಕ : 01–08–2013 ರಿಂದ 31–08–2013 ರವರೆಗೆ ಮುಂದುವರಿಸಿ ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 778 ವೆಚ್ಚ–12/2013, ದಿನಾಂಕ : 31–08–2013ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಚಂದ್ರಶೇಖರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–6).

PR. 1207

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ** : ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ತಂತ್ರಜ್ಞಾನ ಇಲಾಖೆಯಲ್ಲಿನ ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರದ (KSNDMC) ನಿರ್ದೇಶಕರ ಹುದ್ದೆಯನ್ನು ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಆಸುಇ 352 ಸಅಸೇ 2004, ದಿನಾಂಕ : 08–06–2005.
2. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 352 ಸಸಿವಿ 2004, ದಿನಾಂಕ : 29–07–2005.
3. ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ತಂತ್ರಜ್ಞಾನ ಇಲಾಖೆಯ ಕಡತ ಸಂಖ್ಯೆ : ವಿಯಿ 1 ಬಉಕೋ 2013.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯಲ್ಲಿ ಸರ್ಕಾರದ ಅಪರ ಕಾರ್ಯದರ್ಶಿ ಹುದ್ದೆಗೆ ಸಮಾನವಾದ ಒಂದು ನಿರ್ದೇಶಕರು (ಬರ ನಿಯಂತ್ರಣ ಕೋಶ) ಹುದ್ದೆಯನ್ನು ದಿನಾಂಕ : 05–01–2005 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಸೃಜಿಸಲಾಗಿದೆ. ಸದರಿ ಬರ ವಿಕೋಪ ಉಸ್ತುವಾರಿ ಕೇಂದ್ರವಾಗಿ ಉನ್ನತೀಕರಣಗೊಂಡಿದೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಮೇಲ್ಕಾಣಿಸಿದ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ಬರ ನಿಯಂತ್ರಣ ಕೋಶದ ನಿರ್ದೇಶಕರ ಹುದ್ದೆಗೆ ಎದುರಾಗಿ ನಿಯೋಜನೆ ಮೇರೆಗೆ ಕಾರ್ಯನಿರ್ವಹಿಸುತ್ತಿದ್ದ ಕೇಂದ್ರ ಸರ್ಕಾರದ ಜಲಸಂಪನ್ಮೂಲ ಸಚಿವಾಲಯದ ಸೆಂಟ್ರಲ್ ಗ್ರೌಂಡ್ ವಾಟರ್ ಬೋರ್ಡ್‌ನ ವಿಜ್ಞಾನಿ ಶ್ರೀ ವಿ.ಎಸ್. ಪ್ರಕಾಶ್ ರವರನ್ನು ಸಾರ್ವಜನಿಕ ಹಿತದೃಷ್ಟಿಯಿಂದ ದಿನಾಂಕ : 05–01–2005 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಸದರಿ ನಿರ್ದೇಶಕರ ಹುದ್ದೆಯಲ್ಲಿ ವಿಲೀನಗೊಳಿಸಲಾಗಿದೆ.

ಮೇಲೆ (3)ರಲ್ಲಿ ಓದಲಾದ ಕಡತದಲ್ಲಿ ಶ್ರೀ ವಿ.ಎಸ್. ಪ್ರಕಾಶ್ ರವರು ನಿರ್ದೇಶಕರು, (KSNDMC) ಹುದ್ದೆಯ ಗರಿಷ್ಠ ವೇತನ ತಲುಪಿರುವುದರಿಂದ ಹಾಗೂ ಅಧಿಕಾರಿಯವರು ಬರ ನಿರ್ವಹಣೆ ಸಂಬಂಧ ವೈಜ್ಞಾನಿಕ ಮಾಹಿತಿ ನೀಡುವುದರ ಜೊತೆಗೆ ರಾಜ್ಯದಲ್ಲಿ ತಲೆದೋರುವ ಇನ್ನಿತರ ನೈಸರ್ಗಿಕ ವಿಪತ್ತುಗಳ ಬಗ್ಗೆ ಸಹ ಗುರುತರ ಸಾಂಸ್ಥಿಕ ಜವಾಬ್ದಾರಿ ನಿರ್ವಹಿಸುತ್ತಿದ್ದು, ಈ ದಿಸೆಯಲ್ಲಿ ಅಧಿಕಾರಿಯವರು ಸಲ್ಲಿಸಿರುವ (KSNDMC) ಹುದ್ದೆಗೆ (ವೇತನ ಶ್ರೇಣಿ ರೂ. 56550–79800) ಉನ್ನತೀಕರಿಸಿ ಸದರಿ ಹುದ್ದೆಗೆ ಅಧಿಕಾರಿಯವರನ್ನು ನೇಮಿಸುವಂತೆ ಕೋರಲಾಗಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 150 ಸಅಸೇ 2013, ಬೆಂಗಳೂರು, ದಿನಾಂಕ : 22ನೇ ಅಕ್ಟೋಬರ್, 2013**

ಕರ್ನಾಟಕ ಸರ್ಕಾರ ಸಚಿವಾಲಯದ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯಲ್ಲಿ ಪ್ರಸ್ತುತ ಅಸ್ತಿತ್ವದಲ್ಲಿರುವ ರೂ. 52,500–73,000 ವೇತನ ಶ್ರೇಣಿಯ ನಿರ್ದೇಶಕರು (ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರ) ಹುದ್ದೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಈ ಹುದ್ದೆಯಲ್ಲಿ ಡಾ. ವಿ.ಎಸ್. ಪ್ರಕಾಶ್ ಇವರ ಪದಾವಧಿಯವರೆಗೆ ಮಾತ್ರ ವಿಶೇಷ ನಿರ್ದೇಶಕರು (ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರ) ಎಂದು ಉನ್ನತೀಕರಿಸಿ, ಈ ಹುದ್ದೆಯ ವೇತನ ಶ್ರೇಣಿಯನ್ನು ರೂ. 56550–79800ಕ್ಕೆ ನಿಗದಿಪಡಿಸಿದೆ.

ಈ ಉನ್ನತೀಕರಿಸಲಾದ ಹುದ್ದೆಗೆ ನಿರ್ದೇಶಕರು (ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರ) ಈ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವವರನ್ನು ನಿಯುಕ್ತಿಗೊಳಿಸಿ ನೇಮಿಸಲಾಗುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 550 ಸೇ–3/2013, ದಿನಾಂಕ : 21–08–2013ರಲ್ಲಿ ಹಾಗೂ ಸಿಆಸುಇ (ಸೇವಾ ನಿಯಮ) ಟಿಪ್ಪಣಿ ಸಂಖ್ಯೆ : ಸಿಆಸುಇ 140 ಸೇನಿನಿ 2013, ದಿನಾಂಕ : 23–09–2013ರಲ್ಲಿ ನೀಡಿದ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಚಂದ್ರಶೇಖರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–6).

PR. 1208

## ಇಂಧನ ಸಚಿವಾಲಯ

**ವಿಷಯ:** ಮೆ:: ಫೋರ್ ಇಎಫ್ ವಿಂಡ್ ಪವರ್ (ಪ್ರೈವೇಟ್) ಲಿಮಿಟೆಡ್ ಕಂಪನಿಯವರಿಗೆ ಹಂಚಿಕೆಯಾಗಿರುವ 26.75 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ರದ್ದು ಪಡಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 291 ಎನ್‌ಸಿಇ 2005 ದಿನಾಂಕ: 14.10.2005.
2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 329 ಎನ್‌ಸಿಇ 2011 ದಿನಾಂಕ: 09.09.2011.
3) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/Four EF-47.25 MW/2012/149 ದಿನಾಂಕ: 16/17.1.2012.
4) ಸರ್ಕಾರದ ಕಾರಣ ಕೇಳುವ ನೋಟಿಸ್ ದಿನಾಂಕ : 26.04.2012.
5) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/ Four EF-47.25 MW/2012/508 ದಿನಾಂಕ: 02.03.2013.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ:: ಫೋರ್ ಇಎಫ್ ವಿಂಡ್ ಪವರ್ (ಪ್ರೈವೇಟ್) ಲಿಮಿಟೆಡ್ ಕಂಪನಿಗೆ ಬಿಜಾಪುರ, ಬಾಗಲಕೋಟೆ ಮತ್ತು ಕೊಡಗು ಜಿಲ್ಲೆಗಳಲ್ಲಿ ಒಟ್ಟು 47.25 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಂಚಿಕೆ ಮಾಡಲಾಗಿತ್ತು:–

| Sl. No. | Proposed capacity in MW | Near by villages of the proposed areas | Geographical area description of the project |
|---|---|---|---|
| 1 | 5.25 MW | Venkatapura, Belgaum District. | An elevated plain area is situated on the South of Venkatapura village and has 630 and 608m elevation. The proposed area is covered in the following Geographical co-ordinates:<br>**Latitude**: 16°15'0"- 16°17'5" N<br>**Longitude**: 75°3'37"- 75°6'23" E<br>**Peaks:** 630, 608m Amsl |
| 2 | 5.25 MW | Telsang, Honewada, Belgaum and Bijapur District. | A long plain area spread across Bijapur, Atheni State Highway and it is situated between Telsang and Honewada village. This plain area has a gentle elevation and has few peaks. The total area is covered in the following Geographical co-ordinates:<br>**Latitude**: 16°45'0"- 16°48'38" N<br>**Longitude**: 75°20'55"- 75°23'54" E<br>**Peaks:** 685, 694, 696, 683, 693, 683m Amsl |
| 3 | 12.25 MW | Jamkhandi, Bijapur District. | The identified potential area is situated on both sides of the Jamkhandi town and it is also the mixture of forest and non-forest areas. The potential area has no prominent orientation and it is mostly in circular shape. The area has several elevations and is covered in the following Geographical co-ordinates:<br>**Latitude**: 16°27'30"- 16°30'0" N<br>**Longitude**: 75°15'0"- 75°22'10" E<br>**Peaks:** 675, 635, 568, 7, 644, 580, 634m Amsl |
| 4 | 3 MW | Jamkhandi, Bijapur District. | The identified potential area is situated on both sides of the Jamkhandi town and it is also the mixture of forest and non-forest areas. The potential area has no prominent orientation. However, it is open scrub covered with cactus and it has high plain and the area is covered in the following Geographical co-ordinates:<br>**Latitude**: 16°30'0"- 16°30'40" N<br>**Longitude**: 75°15'44"- 75°23'6" E<br>**Peaks:** 653, 632, 653, 649m Amsl |
| 5 | 6.5 MW | Bedarahatti, Adalahatti, Chamakeri, Belgaum District. | A large plain area spread in North-South direction and situated on the North of Bedarahatti and has several high plains and is held in the following Geographical co-ordinates:<br>**Latitude**: 16°48'13"- 16°52'28" N<br>**Longitude**: 75°8'14"- 75°11'20" E<br>**Peaks:** 685, 672, 649, 679m Amsl |

| Sl. No. | Proposed capacity in MW | Near by villages of the proposed areas | Geographical area description of the project |
|---|---|---|---|
| 6 | 15 MW | Talakaveri,<br>Kuttagipillu Motte,<br>Thungapare Motte,<br>Mavala Motte,<br>Madikeri District. | A long East-West oriented contigous ridge is situated on the West of Talakaveri. The potential area as per toposheet is situated in the dense jungle. The continued ridge has several peaks as mentioned below. The total area is covered in the following Geographical co-ordinates:<br>**Latitude**: 12°22'11"- 12°25'26" N<br>**Longitude**: 75°22'8"- 75°30'0" E<br>**Peaks:** 1054, 1139, 1146, 975, 1150, 1152, 1254, 1249, 1172, 1338, 881, 1150, 1355m Amsl |
| **Total - 47.25 MW** | | | |

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ : ಫೋರ್ ಇಎಫ್ ವಿಂಡ್ ಪ್ರೈವೇಟ್ ಲಿಮಿಟೆಡ್ ರವರಿಗೆ ಬೆಳಗಾವಿ ಮತ್ತು ಬಿಜಾಪುರ ಜಿಲ್ಲೆಗಳ ತೆಲ್ಸಂಗ್ ಮತ್ತು ಹೊನ್ನೆವಾಡ ಗ್ರಾಮಗಳಲ್ಲಿ ಮೇಲಿನ ಆದೇಶದ ಕ್ರಮ ಸಂಖ್ಯೆ (2)ರಲ್ಲಿ ಮಂಜೂರಾಗಿದ್ದ 5.25 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ:: ಕೆಎಸ್‌ಕೆ ವಿಂಡ್ ಎನರ್ಜಿ ಶಿಗ್ಗಾಂವ್ ಹಾವೇರಿ ಪ್ರೈವೇಟ್ ಲಿಮಿಟೆಡ್ ರವರಿಗೆ ವರ್ಗಾಯಿಸಿ ಆದೇಶಿಸಲಾಗಿರುತ್ತದೆ.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ:: ಫೋರ್ ಇಎಫ್ ವಿಂಡ್ ಪವರ್ (ಪ್ರೈವೇಟ್) ಲಿಮಿಟೆಡ್ ಕಂಪನಿಗೆ 2005–06ನೇ ಸಾಲಿನಲ್ಲಿ ಹಂಚಿಕೆಯಾಗಿರುವ 47.25 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗಳ ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿಯನ್ನು ಕಾಣದೇ ಇರುವ ಕಾರಣ ಸದರಿ ಯೋಜನೆಗಳನ್ನು ರದ್ದುಪಡಿಸಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ, ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಕಾರಣ ಕೇಳುವ ನೋಟಿಸನ್ನು ಅಭಿವೃದ್ಧಿದಾರರಿಗೆ ಜಾರಿಮಾಡಿ, ಸದರಿ ಪವನ ವಿದ್ಯುತ್ ಯೋಜನೆಯ ಹಂಚಿಕೆಯನ್ನು ಏಕೆ ರದ್ದು ಪಡಿಸಬಾರದು ಎಂಬುದಕ್ಕೆ ಸಮಜಾಯಿಷಿ ನೀಡುವಂತೆ ಕೋರಿ ರಿಜಿಸ್ಟರ್ಡ್ ಪೋಸ್ಟ್ ಮೂಲಕ ಕಳುಹಿಸಲಾಗಿತ್ತು. ಅಭಿವೃದ್ಧಿದಾರರು ದಿನಾಂಕ 17.5.2012ರ ಪತ್ರದಲ್ಲಿ ಸದರಿ ಕಾರಣ ಕೇಳುವ ನೋಟಿಸ್ಸಿಗೆ ಉತ್ತರ ನೀಡಿ, ಈ ಯೋಜನೆಯ ಅನುಷ್ಠಾನದ ಕುರಿತಂತೆ ಪ್ರಗತಿಯನ್ನು ತಿಳಿಸಿರುತ್ತಾರೆ. ಆದುದರಿಂದ, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರಿಗೆ ಅಭಿವೃದ್ಧಿದಾರರು ನೀಡಿರುವ ಉತ್ತರವನ್ನು ಪರಿಶೀಲಿಸಿ ಅಭಿಪ್ರಾಯ ನೀಡುವಂತೆ ದಿನಾಂಕ 05.6.2012ರ ಪತ್ರದಲ್ಲಿ ಕೋರಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ದಿನಾಂಕ 02.03.2013ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ:: ಫೋರ್ ಇಎಫ್ ವಿಂಡ್ ಪವರ್ (ಪ್ರೈವೇಟ್) ಲಿಮಿಟೆಡ್ ರವರಿಗೆ ದಿನಾಂಕ 14.10.2005ರ ಸರ್ಕಾರಿ ಆದೇಶದ ಕ್ರಮ ಸಂಖ್ಯೆ 3 ಮತ್ತು 4 ರಲ್ಲಿ ಮಂಜೂರಾಗಿರುವ 12.25 ಮೆ.ವ್ಯಾ. ಹಾಗೂ 3 ಮೆ.ವ್ಯಾ. ಸಾಮರ್ಥ್ಯದ ಯೋಜನೆಗಳನ್ನು ವರ್ಗಾವಣೆ ಹಾಗೂ ಸಾಮರ್ಥ್ಯ ಹೆಚ್ಚಳಕ್ಕಾಗಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುವುದಾಗಿಯೂ, ಕ್ರಮ ಸಂಖ್ಯೆ 2 ರಲ್ಲಿ ಮಂಜೂರಾಗಿರುವ 5.25 ಮೆ.ವ್ಯಾ. ಸಾಮರ್ಥ್ಯವನ್ನು ಮೆ: ಕೆಎಸ್‌ಕೆ ವಿಂಡ್ ಎನರ್ಜಿ ಶಿಗ್ಗಾಂವ್ ಹಾವೇರಿ ಪ್ರೈವೇಟ್ ಲಿಮಿಟೆಡ್ ರವರಿಗೆ ವರ್ಗಾಯಿಸಲಾಗಿದೆಯೆಂದೂ, ಉಳಿದಂತೆ ಕ್ರಮ ಸಂಖ್ಯೆ 1, 5 ಮತ್ತು 6ರಲ್ಲಿನ ಒಟ್ಟು 26.75 ಮೆ.ವ್ಯಾ. (5.25+6.52+15.00) ಸಾಮರ್ಥ್ಯದ ಯೋಜನೆಗಳನ್ನು ಇನ್ನೂ ಅನುಷ್ಠಾನಗೊಳಿಸಿರುವುದಿಲ್ಲವಾದ್ದರಿಂದ ಹಾಗೂ ಈ ಯೋಜನೆ ಸಂಬಂಧ ಅಭಿವೃದ್ದಿದಾರರು ಸಾಧಿಸಿರುವ ಪ್ರಗತಿಯು ಸಮಾಧಾನಕರವಾಗಿರುವುದಿಲ್ಲವಾದ್ದರಿಂದ ಸದರಿ ಸಾಮರ್ಥ್ಯದ ಯೋಜನೆಗಳನ್ನು ರದ್ದು ಪಡಿಸಬಹುದಾಗಿದೆಯೆಂದು ಶಿಫಾರಸ್ಸು ಮಾಡಿರುತ್ತಾರೆ.

ಆದ್ದರಿಂದ, ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 43 ಎನ್‌ಸಿಇ 2012, ಬೆಂಗಳೂರು, ದಿನಾಂಕ: 05.8.2013.**

ಮೆ : ಫೋರ್ ಇಎಫ್ ವಿಂಡ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಸರ್ಕಾರಿ ಆದೇಶ ಸಂಖ್ಯೆ ಇಎನ್ 291 ಎನ್‌ಸಿಇ 2005 ದಿನಾಂಕ 14.10.2005ರಲ್ಲಿ ಬೆಳಗಾವಿ, ಬಿಜಾಪುರ, ಮತ್ತು ಕೊಡಗು ಜಿಲ್ಲೆಗಳ ವಿವಿಧ ಸ್ಥಳಗಳಲ್ಲಿ ಹಂಚಿಕೆ ಮಾಡಿದ್ದ ಒಟ್ಟು 47.25 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗಳಲ್ಲಿ ಸದರಿ ಆದೇಶದ ಕ್ರಮ ಸಂಖ್ಯೆ–1 (5.25 ಮೆ.ವ್ಯಾ) ಕ್ರಮ ಸಂಖ್ಯೆ–5 (6.5 ಮೆ.ವ್ಯಾ) ಹಾಗೂ ಕ್ರಮ ಸಂಖ್ಯೆ–6 (15 ಮೆ.ವ್ಯಾ.)ರಲ್ಲಿ ಈ ಕೆಳಕಂಡಂತೆ ಮಂಜೂರಾಗಿರುವ ಒಟ್ಟು 26.75 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗಳನ್ನು ಹಾಗೂ ಈ ಸಂಬಂಧ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಿ ಆದೇಶಿಸಿದೆ.

| Sl. No. | Proposed capacity in MW | Near by villages of the proposed areas | Geographical area description of the project |
|---|---|---|---|
| 1 | 5.25 MW | Venkatapura,<br>Belgaum District. | An elevated plain area is situated on the South of Venkatapura village and has 630 and 608m elevation. The proposed area is covered in the following Geographical co-ordinates:<br>**Latitude**: 16°15'0"- 16°17'5" N<br>**Longitude**: 75°3'37"- 75°6'23" E<br>**Peaks:** 630, 608m Amsl |
| 2 | 6.5 MW | Bedarahatti,<br>Adalahatti,<br>Chamakeri,<br>Belgaum District. | A large plain area spread in North-South direction and situated on the North of Bedarahatti and has several high plains and is held in the following Geographical co-ordinates:<br>**Latitude**: 16°48'13"- 16°52'28" N<br>**Longitude**: 75°8'14"- 75°11'20" E<br>**Peaks:** 685, 672, 649, 679m Amsl |

| Sl. No. | Proposed capacity in MW | Near by villages of the proposed areas | Geographical area description of the project |
|---|---|---|---|
| 3 | 15 MW | Talakaveri, Kuttagipillu Motte, Thungapare Motte, Mavala Motte, Madikeri District. | A long East-West oriented contigous ridge is situated on the West of Talakaveri. The potential area as per toposheet is situated in the dense jungle. The continued ridge has several peaks as mentioned below. The total area is covered in the following Geographical co-ordinates:<br>**Latitude**: 12°22'11"- 12°25'26" N<br>**Longitude**: 75°22'8"- 75°30'0" E<br>**Peaks:** 1054, 1139, 1146, 975, 1150, 1152, 1254, 1249, 1172, 1338, 881, 1150, 1355m Amsl |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ.ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**PR.1155**
**SC.50**

## ಇಂಧನ ಸಚಿವಾಲಯ

**ವಿಷಯ:** ಮೆ:: ವೆಸ್ಟ್ ಮೌಂಟನ್ ಪವರ್ ಲಿ., ಕಂಪನಿ ಹಂಚಿಕೆಯಾಗಿರುವ 4.5 ಮೆ.ವ್ಯಾ. ಸಾಮರ್ಥ್ಯದ ಬಂಡಾಜೆ ಕಿರುಜಲ ವಿದ್ಯುತ್ ಯೋಜನೆ ರದ್ದತಿ ಕುರಿತು.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ : ಇಎನ್ 158 ಎನ್‌ಸಿಇ 2005 ದಿನಾಂಕ:1.9.2005.
2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆ.ಆರ್.ಇ.ಡಿ/06/SH-230/ Bandaje MHS/2013/223 ದಿನಾಂಕ :29.1.2013
3) ಸರ್ಕಾರದ ಕಾರಣ ಕೇಳುವ ನೋಟಿಸ್ ದಿನಾಂಕ : 28.02.2013.

**ಪ್ರಸ್ತಾವನೆ :–**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ:: ವೆಸ್ಟ್ ಮೌಂಟನ್ ಪವರ್ ಲಿ., ಕಂಪನಿ ಯವರಿಗೆ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನ ಕಡಿರುದ್ಯಾವರ ಗ್ರಾಮದ ಬಳಿ ಬಂಡಾಜೆ ಹೊಳೆಗೆ ಅಡ್ಡಲಾಗಿ 4.5 ಮೆ.ವ್ಯಾ. ಸಾಮರ್ಥ್ಯದ ಬಂಡಾಜೆ ಕಿರುಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ: ವೆಸ್ಟ್ ಮೌಂಟನ್ ಪವರ್ ಲಿ., ಕಂಪನಿ ಯವರಿಗೆ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನ ಕಡಿರುದ್ಯಾವರ ಗ್ರಾಮದ ಬಳಿ ಬಂಡಾಜೆ ಹೊಳೆ ಅಡ್ಡಲಾಗಿ ಹಂಚಿಕೆ ಮಾಡಿರುವ 4.5 ಮೆ.ವ್ಯಾ. ಸಾಮರ್ಥ್ಯದ ಬಂಡಾಜೆ ಕಿರುಜಲ ವಿದ್ಯುತ್ ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಸಾಧಿಸಿರುವ ಪ್ರಗತಿಯ ವರದಿ ನೀಡುವಂತೆ ಅಭಿವೃದ್ಧಿದಾರರನ್ನು ಕೋರಿದ್ದು, ಸದರಿ ಯೋಜನೆಯು ತಾಂತ್ರಿಕವಾಗಿ ಸಾಧ್ಯವಿಲ್ಲದ ಕಾರಣ ಯೋಜನೆಯನ್ನು ಕೈಬಿಟ್ಟಿರುವುದಾಗಿ ತಿಳಿಸಿರುವುದರಿಂದ ಈ ಯೋಜನೆಯನ್ನು ರದ್ದುಗೊಳಿಸಬಹುದೆಂದು ಶಿಫಾರಸ್ಸುಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಈ ಹಿನ್ನಲೆಯಲ್ಲಿ, ಮೇಲೆ ಕ್ರಮ ಸಂಖ್ಯೆ(3) ರಲ್ಲಿ ಓದಲಾದ ಕಾರಣ ಕೇಳುವ ನೋಟಿಸನ್ನು ಅಭಿವೃದ್ಧಿದಾರರಿಗೆ ಜಾರಿಮಾಡಿ, ಸದರಿ ಕಿರುಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಆದೇಶವನ್ನು ಅನುಷ್ಠಾನಗೊಳಿಸದೇ ಇರುವುದರಿಂದ ಏಕೆ ರದ್ದು ಪಡಿಸಬಾರದು ಎಂಬುದಕ್ಕೆ ಸಮಜಾಯಿಷಿ ನೀಡುವಂತೆ ಕೋರಲಾಗಿತ್ತು. ಇದಕ್ಕೆ ಅಭಿವೃದ್ಧಿದಾರರು ಸಲ್ಲಿಸಿರುವ ದಿನಾಂಕ :06.03.2013 ರ ಉತ್ತರದ ಯೋಜನೆಯು ತಾಂತ್ರಿಕವಾಗಿ ಅನುಷ್ಠಾನಗೊಳಿಸಲು ಸಾಧ್ಯವಿಲ್ಲದ ಕಾರಣ ಕೈಬಿಟ್ಟಿರುವುದಾಗಿ ತಿಳಿಸಿರುತ್ತಾರೆ.

ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 46 ಎನ್‌ಸಿಇ 2013, ಬೆಂಗಳೂರು, ದಿನಾಂಕ: 20.08.2013.**

ಮೆ:: ವೆಸ್ಟ್ ಮೌಂಟನ್ ಪವರ್ ಲಿ., ಕಂಪನಿ ಯವರಿಗೆ ಸರ್ಕಾರಿ ಆದೇಶ ಸಂಖ್ಯೆ :ಇಂಇ 158 ಎನ್ ಸಿಇ 2005 ದಿನಾಂಕ :01.09.2005 ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನ ಕಡಿರುದ್ಯಾವರ ಗ್ರಾಮದ ಬಳಿ ಬಂಡಾಜೆ ಹೊಳೆಗೆ ಅಡ್ಡಲಾಗಿ ಹಂಚಿಕೆ ಮಾಡಿರುವ 4.5 ಮೆ.ವ್ಯಾ. ಸಾಮರ್ಥ್ಯದ ಬಂಡಾಜೆ ಕಿರುಜಲ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಹಾಗೂ ಈ ಸಂಬಂಧ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ.ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**PR.1166**
**SC.50**

## ಇಂಧನ ಸಚಿವಾಲಯ

**ವಿಷಯ:** ಮೆ॥ ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್.ಎಲ್.ಪಿ. ಕಂಪನಿಯವರಿಗೆ ಹಂಚಿಕೆಯಾಗಿರುವ 205.06. ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ 19.2 ಮೆ.ವ್ಯಾ. ಸಾಮರ್ಥ್ಯವನ್ನು ಮೆ॥ ಲಾಲ್‌ಪುರ ವಿಂಡ್ ಎನರ್ಜಿ ಲಿಮಿಟೆಡ್ ರವರಿಗೆ ವರ್ಗಾವಣೆ ಮಾಡುವ ಕುರಿತು.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 42 ಎನ್‌ಸಿಇ 2006 ದಿನಾಂಕ: 20.4.2006.
2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 462 ಎನ್‌ಸಿಇ 2006 ದಿನಾಂಕ: 19.12.2006.
3) ಸರ್ಕಾರಿ ಆದೇಶ ಸಂಖ್ಯೆ: ಇಎನ್ 322 ಎನ್‌ಸಿಇ 2011 ದಿನಾಂಕ: 28.10.2011.
4) ಸರ್ಕಾರಿ ಆದೇಶ ಸಂಖ್ಯೆ: ಇಎನ್ 250 ಎನ್‌ಸಿಇ 2012 ದಿನಾಂಕ: 28.10.2012
5) ಸರ್ಕಾರಿ ಆದೇಶ ಸಂಖ್ಯೆ: ಇಎನ್ 107 ಎನ್‌ಸಿಇ 2013 ದಿನಾಂಕ: 16.05.2013.
6) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ: ಕೆಆರ್‌ಇಡಿ/08/LWEL-19.2MW(VWILLP-205.6 MW)/2013/1750 ದಿನಾಂಕ: 25.07.2013 ಮತ್ತು ಕೆಆರ್‌ಇಡಿ/08/Lalpur Wind Energy-44 MW/2013/1941 ದಿನಾಂಕ: 23.08.2013.

**ಪ್ರಸ್ತಾವನೆ:–**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: Logaer Machines (I) Ltd. ಕಂಪನಿಗೆ ಧಾರವಾಡ ಮತ್ತು ಹಾವೇರಿ ಜಿಲ್ಲೆಗಳಲ್ಲಿ 150.66 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: Logaer Machines (I) Ltd. ಕಂಪನಿಯ ಹೆಸರನ್ನು ಮೆ:: ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಲಿಮಿಟೆಡ್ ಎಂದು ಬದಲಾಯಿಸಲು ಹಾಗೂ ಮೆ:: Logaer Machines (I) Ltd. ರವರಿಗೆ ಹಂಚಿಕೆಯಾಗಿರುವ ಎಲ್ಲಾ ಪವನ ವಿದ್ಯುತ್ ಯೋಜನೆಗಳನ್ನು ಮೆ:: ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಲಿಮಿಟೆಡ್ ಇವರಿಗೆ ವರ್ಗಾಯಿಸಲು ಅನುಮೋದನೆ ನೀಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ, ಕಂಪನಿಗೆ ಮಂಜೂರಾಗಿದ್ದ 150.66 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಅಂಶಿಕ ಸಾಮರ್ಥ್ಯವಾದ 69.63 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 200 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಆದೇಶಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ, ಕಂಪನಿಗೆ ಮಂಜೂರಾಗಿದ್ದ 200 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 204 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಆದೇಶಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ : ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಯವರಿಗೆ ಹಾವೇರಿ ಮತ್ತು ಧಾರವಾಡ ಜಿಲ್ಲೆಗಳ ಶಿಗ್ಗಾಂವ್ ಮತ್ತು ಕುಂದಗೋಳ ತಾಲ್ಲೂಕುಗಳ ವಿವಿಧ ಗ್ರಾಮಗಳಲ್ಲಿ ಹಂಚಿಕೆಯಾಗಿರುವ 204 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 205.6 ಮೆ.ವ್ಯಾ.ಗೆ ಹೆಚ್ಚಿಸಿ ದಿನಾಂಕ 31.3.2014ರೊಳಗೆ ಅನುಷ್ಠಾನಗೊಳಿಸುವ ಷರತ್ತಿಗೊಳಪಟ್ಟು ಆದೇಶಿಸಲಾಗಿರುತ್ತದೆ.

ಮೇಲೆ ಓದಲಾದ (6)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ : ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಯವರಿಗೆ ಹಾವೇರಿ ಮತ್ತು ಧಾರವಾಡ ಜಿಲ್ಲೆಯ ವಿವಿಧ ಗ್ರಾಮಗಳಲ್ಲಿ ಹಂಚಿಕೆಯಾಗಿರುವ 205.6 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 19.2 ಮೆ.ವ್ಯಾ. ಸಾಮರ್ಥ್ಯದ ಯೋಜನೆಯನ್ನು ಮೆ: ಲಾಲ್‌ಪುರ ವಿಂಡ್ ಎನರ್ಜಿ ಲಿಮಿಟೆಡ್ ರವರಿಗೆ ವರ್ಗಾಯಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ ಹಾಗೂ ಮಂಜೂರಾಗಿರುವ ಒಟ್ಟು 205.6 ಮೆ.ವ್ಯಾ. ಸಾಮರ್ಥ್ಯದಲ್ಲಿ 160.00 ಮೆ.ವ್ಯಾ. ಸಾಮರ್ಥ್ಯವನ್ನು ಈಗಾಗಲೇ ವಿವಿಧ ಹೂಡಿಕೆದಾರರಿಗೆ ವರ್ಗಾಯಿಸಿ ಯೋಜನೆಯನ್ನು ಅನುಷ್ಠಾನಗೊಳಿಸಿರುವುದಾಗಿ ತಿಳಿಸಿರುತ್ತಾರೆ. ಅಲ್ಲದೆ, ಸದರಿ ಯೋಜನೆಗೆ ಅವಶ್ಯಕವಾದ ಭೂಮಿಯು ಖಾಸಗಿ ಜಮೀನಾಗಿದ್ದು, ಈ ಯೋಜನೆಯನ್ನು ದಿನಾಂಕ 31.3.2014ರೊಳಗಾಗಿ ಅನುಷ್ಠಾನಗೊಳಿಸುವ ಹಾಗೂ ಉತ್ಪಾದನೆ ಆಗುವ ವಿದ್ಯುತ್ತನ್ನು ಪಿಪಿಎ/ವೀಲಿಂಗ್ ಮತ್ತು ಬ್ಯಾಂಕಿಂಗ್ ಮೂಲಕ 3ನೇ ವ್ಯಕ್ತಿಗೆ ಮಾರಾಟಮಾಡಲಾಗುವುದಂದು ತಿಳಿಸುತ್ತಾ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 203 ಎನ್‌ಸಿಇ 2013, ಬೆಂಗಳೂರು, ದಿನಾಂಕ: 16.9.2013.**

ಮೆ : ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಯವರಿಗೆ ಹಾವೇರಿ ಮತ್ತು ಧಾರವಾಡ ಜಿಲ್ಲೆಯ ವಿವಿಧ ಗ್ರಾಮಗಳಲ್ಲಿ ಹಂಚಿಕೆಯಾಗಿರುವ 205.6 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ ಅನುಷ್ಠಾನಕ್ಕೆ ಬಾಕಿ ಇರುವ 45.6 ಮೆ.ವ್ಯಾ. ಸಾಮರ್ಥ್ಯದಲ್ಲಿ **19.2 ಮೆ.ವ್ಯಾ.** ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ: ಲಾಲ್‌ಪುರ ವಿಂಡ್ ಎನರ್ಜಿ ಲಿಮಿಟೆಡ್ ರವರಿಗೆ ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಕೆಳಕಂಡ ಷರತ್ತಿಗೊಳಪಟ್ಟು **ವರ್ಗಾಯಿಸಲಾಗಿದೆ:–**

| Capacity in MW | Description of area |
|---|---|
| 80.80 MW | A large plain area spread around the villages of Timmapur, Kabnur, Ingalgi, Ramapura in Haveri and Dharwad district and it also consists of plains with higher elevations and has two main peaks. The proposed area is held by the following Geographical co-ordinates:<br>Latitude: 15°1'55'- 15°8'0'' N<br>Longitude: 75°08'56'- 75°14'23'' E<br>Ridge Peaks: 701, 714, 682, 717, 713, 698, 733, 722m Amsl |

| Capacity in MW | Description of area |
|---|---|
| 124.80 MW | A very vast area encompasses high plains and small ridges spread around the villages Kongapura, Sisvinhal, Shanlipur, Huvinsigli, Sigli, Gudgeri and Ramgeri. A railway track runs into this area. This area has moderate elevations varying from 580 to 680 Mtrs and also consists of several peaks. The main places of this areas are Halgur, Gudgeri, Lakshmeshwar, Sigli, Karadgi, Nelgudda etc and the area is covered in the following Geographical co-ordinates:<br>Latitude: 15°0'0'- 15°10'30'' N<br>Longitude: 75°15'0'- 75°28'19'' E<br>Ridge Peaks: 681, 671, 676, 638, 624, 698, 664, 611, 644, 701, 720, 663, 682, 664, 708, 665, 664m Amsl |
| **205.6 MW** | |

| Sl.No | Village Name | Taluk/ District | MW | Land Survey number | WTG's No. | Extent of Land per WTG (Acres) | Latitude and Longitude |
|---|---|---|---|---|---|---|---|
| 1 | Chik Harakuni | Kundagol/Dharwad | 0.80 | 19/2 | 235 | 1.10 | Lat: 15°07'42" N<br>Long: 75°17'0.4" E |
| 2 | Chik Harakuni | Kundagol/Dharwad | 0.80 | 19/1 | 236 | 1.10 | Lat: 15°07'48.5" N<br>Long: 75°17'0.1'' E |
| 3 | Chik Harakuni | Kundagol/Dharwad | 0.80 | 17/3 | 237 | 1.05 | Lat: 15°07'57.7" N<br>Long: 75°17'3.6'' E |
| 4 | Kamadolly | Kundagol/Dharwad | 0.80 | 186/1 | 238 | 1.10 | Lat: 15°08'6.4" N<br>Long: 75°17'9.1'' E |
| 5 | Chik Harakuni | Kundagol/Dharwad | 0.80 | 30/2 | 239 | 1.05 | Lat: 15°08'6.9" N<br>Long: 75°16'53'' E |
| 6 | Kamadolly | Kundagol/Dharwad | 0.80 | 226 | 240 | 1.10 | Lat: 15°08'14.6" N<br>Long: 75°17'8.5" E |
| 7 | Kunkoor | Kundagol/Dharwad | 0.80 | 134 & 134 | 241 | 1.10 | Lat: 15°08'18.2" N<br>Long: 75°16'55.6'' E |
| 8 | Kamadolly | Kundagol/Dharwad | 0.80 | 226 | 242 | 1.10 | Lat: 15°08'25.5" N<br>Long: 75°17'7.4" E |
| 9 | Chik Harakuni | Kundagol/Dharwad | 0.80 | 32/8 | 243 | 1.05 | Lat: 15°08'26.3" N<br>Long: 75°16'54'' E |
| 10 | Kamadolly | Kundagol/Dharwad | 0.80 | 160 | 244 | 1.05 | Lat: 15°08'30.7" N<br>Long: 75°16'47.3'' E |
| 11 | Tarlagatta | Kundagol/Dharwad | 0.80 | 147/4 | 245 | 1.00 | Lat: 15°08'37" N<br>Long: 75°16'42.7'' E |
| 12 | Tarlagatta | Kundagol/Dharwad | 0.80 | 146 | 246 | 1.10 | Lat: 15°08'34.8" N<br>Long: 75°16'24.5'' E |
| 13 | Tarlagatta | Kundagol/Dharwad | 0.80 | 153 | 247 | 1.00 | Lat: 15°08'41" N<br>Long: 75°16'36.7'' E |
| 14 | Hirebudhhal | Kundagol/Dharwad | 0.80 | 220 | 248 | 1.10 | Lat: 15°08'41" N<br>Long: 75°16'24.3'' E |
| 15 | Tarlagatta | Kundagol/Dharwad | 0.80 | 191/2A | 249 | 1.10 | Lat: 15°08'46.2" N<br>Long: 75°16'30.9'' E |
| 16 | Tarlagatta | Kundagol/Dharwad | 0.80 | 161 | 250 | 1.05 | Lat: 15°08'46.5" N<br>Long: 75°16'18.4'' E |
| 17 | Tarlagatta | Kundagol/Dharwad | 0.80 | 154 | 251 | 1.10 | Lat: 15°08'53.3" N<br>Long: 75°16'15.8'' E |
| 18 | Tarlagatta | Kundagol/Dharwad | 0.80 | 163/2A+2B | 252 | 1.05 | Lat: 15°09'01" N<br>Long: 75°16'10.7'' E |
| 19 | Tarlagatta | Kundagol/Dharwad | 0.80 | 8 | 253 | 1.02 | Lat: 15°09'8.1" N<br>Long: 75°16'4.9" E |

| Sl.No | Village Name | Taluk/ District | MW | Land Survey number | WTG's No. | Extent of Land per WTG (Acres) | Latitude and Longitude |
|---|---|---|---|---|---|---|---|
| 20 | Tarlagatta | Kundagol/Dharwad | 0.80 | 139 | 254 | 1.05 | Lat: 15°09'8.8" N<br>Long: 75°15'52.9'' E |
| 21 | Tarlagatta | Kundagol/Dharwad | 0.80 | 103/4 | 255 | 1.00 | Lat: 15°09'18.9" N<br>Long: 75°15'54.4'' E |
| 22 | Tarlagatta | Kundagol/Dharwad | 0.80 | 103/2 | 256 | 1.10 | Lat: 15°09'13.1" N<br>Long: 75°15'32.8'' E |
| 23 | Tarlagatta | Kundagol/Dharwad | 0.80 | 105/6 | 257 | 1.10 | Lat: 15°09'20.5" N<br>Long: 75°15'41.1'' E |
| 24 | Kamadolly | Kundagol/Dharwad | 0.80 | 167 | 258 | 1.05 | Lat: 15°09'27.8" N<br>Long: 75°15'50.3'' E |
| | | **Total** | **19.2** | | | | |

1 **ಮೆ:: ಲಾಲ್‌ಪುರ ವಿಂಡ್ ಎನರ್ಜಿ ಲಿಮಿಟೆಡ್** ರವರು 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 2011 ದಿನಾಂಕ 06.1.2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.

2 **ಮೆ:: ಲಾಲ್‌ಪುರ ವಿಂಡ್ ಎನರ್ಜಿ ಲಿಮಿಟೆಡ್** ರವರು ಉತ್ಪಾದಿಸುವ ವಿದ್ಯುತ್ತನ್ನು ಪಿಪಿಎ/ವೀಲಿಂಗ್ ಮತ್ತು ಬ್ಯಾಂಕಿಂಗ್ ಮೂಲಕ 3ನೇ ವ್ಯಕ್ತಿಗೆ ಮಾರಾಟ ಮಾಡಲು ಅನುಮತಿಸಿದೆ.

3 ಸದರಿ ಯೋಜನೆಯನ್ನು ದಿನಾಂಕ 31.3.2014ರೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು. ಯಾವುದೇ ಕಾರಣಕ್ಕೂ ಕಾಲಾವಧಿ ವಿಸ್ತರಿಸುವುದಿಲ್ಲ. ನಿಗಧಿತ ಅವಧಿಯೊಳಗೆ ಯೋಜನೆ ಅನುಷ್ಠಾನಗೊಳಿಸದಿದ್ದಲ್ಲಿ, ನಿಯಮಾನುಸಾರ ಯೋಜನೆಯ ಹಂಚಿಕೆಯನ್ನು ರದ್ದುಪಡಿಸಲಾಗುವುದು ಮತ್ತು ಸೂಕ್ತ ದಂಡ ವಿಧಿಸಲಾಗುವುದು.

4 ಮೆ॥ ಲಾಲ್‌ಪುರ ವಿಂಡ್ ಎನರ್ಜಿ ಕಂಪನಿ ಲಿ. ರವರಿಗೆ ನೆಟ್‌ವರ್ತ್ ಬಗ್ಗೆ ಗ್ಯಾರಂಟಿ ನೀಡಿರುವ ಮೆ॥ ಐ.ಎಲ್. & ಎಫ್‌ಎಸ್ ಎನರ್ಜಿ ಡೆವಲಪ್‌ಮೆಂಟ್ ಕಂಪನಿಯು ಯೋಜನೆ ಅನುಷ್ಠಾನಕ್ಕೆ ಮುಂಚೆ ಗ್ಯಾರಂಟಿಯನ್ನು ಹಿಂಪಡೆದಲ್ಲಿ ಸೂಕ್ತ ದಂಡ ವಿಧಿಸಲಾಗುವುದು.

5 ಯೋಜನೆಯ ಪ್ರಗತಿ ಕುರಿತು ಅಭಿವೃದ್ದಿದಾರರು ಪ್ರತಿ 6 ತಿಂಗಳಿಗೊಮ್ಮೆ ಕೆಆರ್‌ಇಡಿಎಲ್ ಸಂಸ್ಥೆಗೆ ಪ್ರಗತಿ ವರದಿ ಸಲ್ಲಿಸತಕ್ಕದ್ದು.

6 ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ.ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**PR.1176**
**SC.25**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ಸಂಖ್ಯೆ:ಆಕುಕ 546 ಪಿಐಎಂ 2012, ಬೆಂಗಳೂರು, ದಿನಾಂಕ: 23-10-2013**

**ತಿದ್ದುಪಡಿ**

ಅಧಿಸೂಚನೆ ಸಂಖ್ಯೆ: HFW 546 PIM 2012 dated: 15.05.2013ರ Schedule 3 ರ ತ:ಖ್ತೆಯಲ್ಲಿನ ಕಾಲಂ 3 ರಲ್ಲಿನ ವಿವರಗಳ ಬದಲಾಗಿ ಕಾಲಂ 4ರಲ್ಲಿರುವಂತೆ ಸೇರಿಸಿ ತಿದ್ದಿ ಓದಿಕೊಳ್ಳತಕ್ಕದ್ದು.

| ಕ್ರಮ ಸಂಖ್ಯೆ | ದಿನಾಂಕ15.5.2013 ರ ಅಧಿಸೂಚನೆ ಯಲ್ಲಿನ ಕ್ರಮಸಂಖ್ಯೆ | ದಿನಾಂಕ 15.5.2013ರ ಅಧಿಸೂಚನೆಯಲ್ಲಿರುವುದು | ಓದಿಕೊಳ್ಳಬೇಕಾಗಿರುವುದು |
|---|---|---|---|
| **AYURVEDA** | | | |
| 1 | 1 | GAD, CHENNMGERE, K.R.TALUK, MYSORE DISTRICT. | GAD, UNDAVADI, HUNSURU TALUK, MYSORE DISTRICT |
| 2 | 17 | DR.BALABEER SINGH | DR.BALBEER SING |
| 3 | 35 | DR.NARINALA RAJASHEKARA | DR.RAJASHEKAR NARANALA |
| 4 | 36 | DR.JYOTHI KATTI | DR.KATTI JYOTI |
| 5 | 45 | DR. ALLAVUDDIN P NADAF | DR.ALLAVUDDEEN NADAF |

| ಕ್ರಮ ಸಂಖ್ಯೆ | ದಿನಾಂಕ15.5.2013 ರ ಅಧಿಸೂಚನೆ ಯಲ್ಲಿನ ಕ್ರಮಸಂಖ್ಯೆ | ದಿನಾಂಕ 15.5.2013ರ ಅಧಿಸೂಚನೆಯಲ್ಲಿರುವುದು | ಓದಿಕೊಳ್ಳಬೇಕಾಗಿರುವುದು |
|---|---|---|---|
| 6 | 46 | DATED:06.12.2006 | DATED:05.12.2006 |
| 7 | 47 | DR.RAVISHANKARA UDUPA | DR.RAVISHANKAR UDUPA |
| 8 | 48 | DR. RAVI K GANGOOR | DR.RAVI K GANGUR |
| 9 | 51 | DATED:06.12.2006 | DATED:05.12.2006 |
| 10 | 53 | DAVABAGERE DISTRICT | DAVANAGERE DISTRICT |
| 11 | 54 | DAVABAGERE DISTRICT | DAVANAGERE DISTRICT |
| 12 | 55 | GAD, HARAPANHALLI, HARAPANHALLI TALUK, DAVABAGERE DISTRICT | GAH, HARAPANHALLI, HARAPANHALLI TALUK, DAVANAGERE DISTRICT |
| 13 | 56 | DAVABAGERE DISTRICT | DAVANAGERE DISTRICT |
| 14 | 57 | GAD, HOLIKATTE, HARAPANHALLI, DAVABAGERE DISTRICT | GAD, HULIKATTE, HARAPANHALLI TALUK, DAVANAGERE DISTRICT |
| 15 | 58 | GAD, PALAVANHALLI, DAVABAGERE DISTRICT | GAD, KADARANAHALLI, CHANNAGIRI TALUK, DAVANAGERE DISTRICT |
| 16 | 59 | DAVABAGERE DISTRICT | DAVANAGERE DISTRICT |
| 17 | 60 | GAD, HOSAKADLEBALLU, DAVABAGERE TALUK, DAVANAGERE DISTRICT | GAD, KANAGONDANAHALLI, DAVANAGERE TALUK, DAVANAGERE DISTRICT |
| 18 | 61 | DAVABAGERE DISTRICT | DAVANAGERE DISTRICT |
| 19 | 62 | DR.NAGARATHNA MAASOORA | DR.NAGARATNA MASUR |
| 20 | 73 | 20.05.1975 | 25.05.1975 |
| 21 | 75 | GAH, GUNDLUPET, CHAMARAJA - NAGAR TALUK, CHAMARAJANAGAR DISTRICT | GAH, GUNDLUPET, GUNDLUPET TALUK, CHAMARAJA NAGAR DISTRICT |
| 22 | 84 | GAD, DODDATEKALABATTI, HOLAKERE TALUK, CHITRADURGA DISTRICT | GAD, CHITRAHALLI, HOLAKERE TALUK, CHITRADURGA DISTRICT |
| 23 | 94 | DR.SARASWATHI KOTTE | DR.SARASWATHI KOTIE |
| 24 | 95 | DR.APPARAO AGARDE | DR.APPARAO ARGADE |
| 25 | 98 | GAD, MYAKALURAHALLI, HIRIYUREU TALUK, CHITRADURGA DISTRICT | GAD, GHATAPARTHI CHALLEKERE TALUK, CHITRADURGA DISTRICT |
| 26 | 108 | GAD,HAMPAPATTANA, H.B.HALLI TALUK, BELLARY DISTRICT | GAD,BAILUVADDIGERE, HOSPETE TALUK, BELLARY DISTRICT |
| 27 | 110 | DR.NEETHA JOGAN M.L. | DR.NITA JOGAN M.L. |
| | | **UNANI** | |
| 28 | 124 | DR.SYED SHAAH NOORULLA HUSSAINI | DR.SYED SHAH NOORULLAH HUSSAINI |
| 29 | 125 | DR.NASIRUDDIN | DR.NASEERUDDIN |
| 30 | 126 | DR.SADIYA NUJAHAT | DR.SADIYA NUZHAT |
| 31 | 129 | DR.AHAMED SHARIF | DR.AMJAD SHARIF |
| | | **HOMOEOPATHY** | |
| 32 | 136 | GULBARGA DISTRICT | YADAGIRI DISTRICT |
| 33 | 137 | GULBARGA DISTRICT | YADAGIRI DISTRICT |
| 34 | 138 | GULBARGA DISTRICT | YADAGIRI DISTRICT |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎನ್.ಹರಿಣಿಯಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ,

(ಭಾರತೀಯ ವೈದ್ಯ ಪದ್ಧತಿ ಮತ್ತು ಸಮನ್ವಯ)

**PR.1094**

**SC.50**

ಸರ್ಕಾರಿ ಕೇಂದ್ರ ಮುದ್ರಣಾಲಯ, ಘಟಕ–2, ಬೆಂಗಳೂರು–59.